# ಕೊರವಂಜಿ

*Koravanji*

ಜುಲೈ
೧೯೫೪




ಸಂಪಾದಕರು :
ಶ್ರೀ॥ ರಾ. ಶಿ.


ಬರಹಗಾರರು :

ಶ್ರೀ॥ ಬಚ್ಚ
ಶ್ರೀ॥ "ಕೇಫ"
ಶ್ರೀ॥ ಪಾಟಾಳಿ
ಶ್ರೀ॥ ಶೇಖರ್
ಶ್ರೀ॥ ಅ. ರಾ. ಸೇ.
ಶ್ರೀ॥ ರೇವಣ್ಣ
ಶ್ರೀ॥ ಪಾಂಡುರಂಗ
ಶ್ರೀ॥ ರಾಮಕೃಷ್ಣ
ಶ್ರೀ॥ ನಾ. ಕಸ್ತೂರಿ
ಶ್ರೀ॥ ದಾಶರಥೀ ದೀಕ್ಷಿತ್
ಶ್ರೀ॥ ಬೆ. ಚಂ.
ಶ್ರೀ॥ ಕನಸಿಗ

ಇತ್ಯಾದಿ, ಇತ್ಯಾದಿ.

ಬಿಡಿ ಪ್ರತಿ
ಕೇವಲ

ತಿಳಿನಗೆಯ ಮಾಸಪತ್ರಿಕೆ



# ಒಳ್ಳೆ ಅದೃಷ್ಟ

## ಮೀನಿನ ಮೂಳೆಯಿಂದ

ಅಮೆರಿಕಾದ ಟೆಕ್ಸಸ್‌ನಲ್ಲಿ ಜನರು ಮೀನಿನ ತಲೆಯ ಮೂಳೆಯೊಂದನ್ನು ಅದೃಷ್ಟಕ್ಕಾಗಿ ತಮ್ಮ ಹತ್ತಿರ ತಾಯಿತಿಯಂತೆ ಇರಿಸಿಕೊಳ್ಳುತ್ತಾರೆ. ತಾಯಿತಿಯು ಕಳೆದುಹೋದರೆ ಅದೃಷ್ಟ ಬರುತ್ತದಂತೆ!

ಎಲ್ಲವೂ ಅಂಧಮಯವಾದಾಗ ಸಂಸಾರದಲ್ಲಿ ದುಡಿಯುವವನು ಮರಣ ಹೊಂದಿದಾಗ, ಮುಪ್ಪುಬಂದು ಸಂಪಾದಿಸಲಾಗದೆ ಇದ್ದಾಗ, ವಿಮೆಯು ಅದೃಷ್ಟದ ತಾಯಿತಿಯಂತೆ ಅಪಾರ ಸಹಾಯವನ್ನು ಕೊಡುವುದು.

ಬಾಂಬೆ ಮ್ಯೂಚುಯಲ್ ವಿಮೆಯು ಮಾನವ ಜೀವನ ಮತ್ತು ಆಸೆಯನ್ನು ಅಂತಹ ವೇಳೆಗಳಲ್ಲಿ ತರುತ್ತದೆ.





**ಎಂಡೋಮೆಂಟ್ ಅಶ್ಯೂರೆನ್ಸ್**

ಹಣ ಶೇಖರಿಸಿಡಲು ಅತ್ಯುತ್ತಮ ಮಾರ್ಗ. ವಿಮಾಧಾತನು ಅಲ್ಪಾಯುವಾದಲ್ಲಿ ಸಂಸಾರಕ್ಕೆ ರಕ್ಷಣೆ ಈಯುವುದು. ಹಿರಿಯ ವಯಸ್ಸಿನಲ್ಲಿ ಆತನಿಗೇ ಕೈನೆರವಾಗುತ್ತದೆ

ಸ್ಥಾಪನೆ:
1871

ದಿ
**ಬಾಂಬೆ ಮ್ಯೂಚುವಲ್**
**ಲೈಫ್ ಅಷ್ಯೂರೆನ್ಸ್ ಸೊಸೈಟಿ ಲಿಮಿಟೆಡ್,**
ಬಾಂಬೆ ಮ್ಯೂಚುವಲ್ ಬಿಲ್ಡಿಂಗ್,
ದಾಧಾಬಾಯ್ ನೌರೋಜಿ ರೋಡ್, ಬೊಂಬಾಯಿ 1.
ಬೆಂಗಳೂರು ಬ್ರಾಂಚ್ ಕಛೇರಿ:—172/3, ನರಸಿಂಹರಾಜಾ ರಸ್ತೆ, ಬೆಂಗಳೂರು 2.

NAS 139

**EVERY POLICYHOLDER A SHAREHOLDER**




ಸಂಪುಟ ೧೩ ಜುಲೈ ೧೯೫೪ ಸಂಚಿಕೆ ೪

## ಕುಹಕಿಡಿಗಳು

ಏನೇ ಬೋರೀ ತಾರಾಟ ಅಂತ ದೆಹಲಿಯಲ್ಲಿ ಅಂದರೆ

—ಚೌ ಎನ್ ಲೈ ಮನೆಯಲ್ಲಿ ದೇಶದೂಟ ಅಂದಳಂತೆ.

*  *  *

ಕಾಂಗ್ರೆಸ್ಸಿನಲ್ಲಿ ಒಮ್ಮತವಿರಲೇಬೇಕು. ದ್ವಿಪಕ್ಷೀಯ ಮುಖಂಡರೂ ಒಟ್ಟು ಕುಳಿತು ಸಮಾಲೋಚನೆ ಮಾಡಬೇಕು. (ಹಿರಿಯರ ಹೇಳಿಕೆ)

—ದ್ವಿಪಕ್ಷೀಯ ಮುಖಂಡರುಗಳು ಒಟ್ಟು ಕುಳಿತುಕೊಳ್ಳುವಾಗ V ಮಾದರಿಯ ಮೇಜಿನಮುಂದೆ ಕುಳಿತರೆ ಚೆನ್ನೆಂದು ನಮ್ಮ ಸಲಹೆ.

ಇಬ್ಬರೂ ಕಲೆತು ಧ್ಯೇಯವೊಂದನ್ನು ಸಾಧಿಸುತ್ತಾರೆ ಎಂದೂ ಅರ್ಥವಾಗಬಹುದು. ಹಾಗೂ ಇಬ್ಬರೂ ಕವಲೊಡೆದಿದ್ದಾರೆ ಎಂದೂ ಸಾರ್ಥಕಗೊಳಿಸಬಹುದು.

*  *  *

ತಿರುಚಿರಪಳ್ಳಿಯ ಹತ್ತಿರ ಹುಟ್ಟಿದ ಮಗುವೊಂದಕ್ಕೆ ಒಂದು ಪಾದ ಮುಂದಕ್ಕೆ, ಒಂದು ಪಾದ ಹಿಂದಕ್ಕೆ ತಿರುಗಿದೆಯಂತೆ.

—ಕಾಂಗ್ರೆಸ್ ಸಂಸ್ಥೆಯು ಈ ಮಗುವನ್ನು ಚಿಹ್ನೆಗಾಗಿ ದತ್ತು ತೆಗೆದುಕೊಳ್ಳುತ್ತಿದೆ ಎಂಬುದು ಶುದ್ಧ ಕುಹಕ!

*  *  *

ಕಳೆದ ಮೂವತ್ತು ವರ್ಷದಿಂದ ಕಂತು ಕಟ್ಟಿದ ೨೦,೦೦೦ ರೂಪಾಯಿನ ಮೊಬಲಗು ಇಂದು ವಿಮೆದಾರನಿಗೆ ಪಾವತಿಯಾಯಿತು. (ಪತ್ರಿಕೆ)

—ವಿಮೆ ಕಟ್ಟಿದಾಗ ಇದು ೨೮,೦೦೦ ರೂಪಾಯಿ ಬೆಲೆ ಬಾಳುತ್ತಿತ್ತು.

* * *

ಶುಭದಿನ, ಒಳ್ಳೆಯ ಮುಹೂರ್ತ, ಸರಿಯಾದ ನಕ್ಷತ್ರ ಇವೆಲ್ಲವನ್ನೂ ನೋಡಿಕೊಂಡು ಚೀನಾಕ್ಕೆ ಹೋಗುತ್ತೇನೆ. (ಪಂ॥ ನೆಹ್ರೂ)

—ಯಾಕೆ? ಅಲ್ಲಿ ಕಲ್ಯಾಣವಾಗಲು ಹೋಗಬಯಸಿದ್ದಾರೆಯೇ?

* * *

ಸಾವಿರ ಕುದುರೆ ಸರದಾರ, ಪಾರ್ಟ್ ಬಿ. ಪರಶುರಾಮ್ ಕಬರ್‌ದಾರ!
ನೀತಿ ಹೇಳುಕ್ಕೆ ಆತನ್ನ ಕರೆಸಿದರೆ, ಆತ, ರಾಜಕೀಯ, ಟೋಪಿ, ಅಮಲ್‌ದಾರ!
ಅಂಗೈ ಹುಣ್ಣು, ತಿಂಗಳ ಬೆಳಕು, ಕನ್ನಡಿ ಏಕೆ ಕೋಡಂಗೀಗೆ?
ಹನಿಗೂಡಿದರೆ ಹಳ್ಳ, ಹಳ್ಳಕ್ಕೆ ಬಿದ್ದರೆ ತೋಳ.

—ಏನ್ರಿ ಇದು ಅನ್ನಬೇಡಿ–ನವ್ಯ ಗಾದೆಗಳು.

* * *

ಕರಿದ ಪದಾರ್ಥಗಳನ್ನು ತಿಂದವರು ಅಂದ ಚಂದದ ಹೆಂಡಿರಾಗಿ ಇರಲು ಅಸಾಧ್ಯ. (ಪತ್ರಿಕೆ)

—ಅಂದಚಂದದ ಹೆಂಡಿರು ಕರಿದ ಪದಾರ್ಥಗಳು ಚೆಂದವೇ ಅಲ್ಲವೇ?

* * *

ಎಲ್ಲೆಲ್ಲೂ ವಿದ್ಯಾಭ್ಯಾಸದ ಸುಧಾರಣೆಗಳ ಮಾತೇಮಾತು. (ಹೇಳಿಕೆ)

—ಮುಂದಿನ ಜನಾಂಗಕ್ಕೆ ರಾಜಕಾರಣಿಗಳನ್ನು ತಯಾರಿಸಬೇಕಾದರೆ ಅಸಮಾಧಾನವೇ ಅಸ್ಥಿಭಾರ ಆಗಬೇಕಲ್ಲವೇ?

* * *

ಕೈ ಕುಲುಕುವುದರಿಂದ ಸಾಂಕ್ರಾಮಿಕ ಜಾಡ್ಯಗಳು ಹರಡುತ್ತವೆ.

— ಇದೇ ಸಬೂಬನ್ನು ಚುಂಬನಕ್ಕೂ ಅನ್ವಯಿಸಿದ್ದರು ಮೊದಮೊದಲು.

* * *

ಆಸ್ಪತ್ರೆಗೆ ಹೋಗಿ ಡಾಕ್ಟರೆಲ್ಲಿ ಅಂದರೆ, ಅವರು ಇನ್ನೊಂದು ಆಸ್ಪತ್ರೆಗೆ ಹೋಗಿದ್ದಾರೆ ಎಂದರಂತೆ.

— ಏಕೆ! ತಮ್ಮ ಆಸ್ಪತ್ರೆಯಲ್ಲಿ ಔಷಧಿ ತೆಗೆದುಕೊಳ್ಳಲು ಅವರಿಗೆ ಭಯವೇ!

* * *



# ಉರಿಗಾಳು

ಮೊನ್ನೆ ಬೆಂಗಳೂರಲ್ಲಿ ನಡೆದ ಒಂದು ಮದುವೆ ಸಮಾರಂಭದಲ್ಲಿ ಅಳಿಯನ ಜೊತೆ ಬಂದಿದ್ದ ಗೆಳೆಯನೂ ಅಳಿಯನಷ್ಟೇ ಅಳು ಮೋರೆಯವನಾಗಿದ್ದನಂತೆ

* * *

ಪ್ರಸಿದ್ಧ ಪೈಲ್ವಾನ್ ಒಬ್ಬ ಫುಟ್‌ಬಾಲ್ ಟೀಮಿಗೆ ಸೇರಲು ನಿರ್ಧರಿಸಿರುವುದರಿಂದ, ಫುಟ್‌ಬಾಲ್ ಆಟಗಾರರಿಗೆಲ್ಲ ಕುಸ್ತಿ ಕಲಿಸಲು ಏರ್ಪಾಟು ಮಾಡಬೇಕಾಗಿ ಬಂದಿದೆಯಂತೆ.

* * *

ಹೊಸ ವಿಧಾನ ಸೌಧದಲ್ಲಿ ಅಸೆಂಬ್ಲಿ ಮೆಂಬರುಗಳ ಭಾಷಣದ ಪ್ರತಿ ಮಾತೂ ಚೆನ್ನಾಗಿ ಎಲ್ಲರಿಗೂ ಕೇಳಿಸುವಂತೆ ವ್ಯವಸ್ಥೆ ಮಾಡಲಾಗುವುದಂತೆ. ಈಗಿನ ವ್ಯವಸ್ಥೆಯೇ ತುಂಬ ಅನುಕೂಲವಾಗಿದೆ ಎಂದು ಅನೇಕರು ಅಭಿಪ್ರಾಯ ಪಡುತ್ತಿದಾರೆ.

* * *

ರೇಡಿಯೋ ಕೇಂದ್ರಗಳಿಂದ, ಗ್ರಾಮಸ್ಥರ ಕಾರ್ಯ ಕ್ರಮದ ಅಂಗವಾಗಿ, ದಿನವೂ ಬೆಳಗ್ಗೆ ಕೋಳಿಯ ಕೂಗನ್ನು ಪ್ರಸಾರ ಮಾಡುವ ಯೋಜನೆಯೊಂದನ್ನು ಜಾಣರೊಬ್ಬರು ಸೂಚಿಸಿರುವರಂತೆ.

* * *

ಪಾನ ನಿರೋಧವನ್ನು ನಿಲ್ಲಿಸಿದರೂ, ಜನ ಯಥಾಪ್ರಕಾರ ಈಗಿನಂತೆಯೇ, ಕುಡಿದು ಹಾಳಾಗುತ್ತಾರೆ, ಎಂದು ಅನೇಕ ಜನನಾಯಕರು ಮರುಗುತ್ತಿದಾರೆ........ ಪಾನನಿರೋಧ ಕಾಲದಲ್ಲಿ ಕಲಿತ ಅಭ್ಯಾಸವನ್ನು ಬೇಗನೆ ತೊರೆಯುವಂತಿಲ್ಲ.

* * *

ರಸ್ತೆಗಳಲ್ಲೂ ಪಾರ್ಕುಗಳಲ್ಲೂ ಕಾಗದದ ಚೂರುಗಳನ್ನು ಬಿಸಾಕಬೇಡಿ, ಎಂದು ಜನರನ್ನು ಬೇಡಿಕೊಳ್ಳುವ ಕಾಗದದ ಚೂರುಗಳನ್ನು ಅಲ್ಲೆಲ್ಲ ಹಂಚಲು ಇಷ್ಟರಲ್ಲೇ ಏರ್ಪಾಟು ಮಾಡಲಾಗುವುದಂತೆ.

* * *

ಮುಂದೆ, ವಿವಾಹಕ್ಕೆ ೧೦ರೂ ಫೀ ಕೊಡಬೇಕಾಗುತ್ತೆ; ಆದರೆ ವಿವಾಹ ವಿಚ್ಛೇದನ ಮಾತ್ರ ಸತಿಪತಿಯರಿಬ್ಬರೂ, ಒಪ್ಪಿದ ತಕ್ಷಣ ಖರ್ಚಿಲ್ಲದೆ ನಡೆಸ ಬಹುದು........ಇದರಿಂದೇನು ಪ್ರಯೋಜನ? ವಿವಾಹವಾಗದೆ, ವಿವಾಹವಿಚ್ಛೇದನ ಹೇಗೆ?

*    *    *

ಕೆಲವು ಜಾತಿಯ ಸೊಪ್ಪುಗಳನ್ನು ಬೆಳೆಸಿದರೆ, ಅವು ಗಾಳಿಯಲ್ಲಿ ತೂರಿ ಬರುವ ಮರಳನ್ನು ತಡೆಯುತ್ತವೆ; ಅಂಥ ಸೊಪ್ಪನ್ನು ರಾಜಾಸ್ಥಾನದಲ್ಲಿ ಮರಳುಗಾಡು ವಿಸ್ತರಣವನ್ನು ತಡೆಯಲು ಬೆಳೆಸುತ್ತಾರೆ....ನಮ್ಮ ಹೋಟಲಲ್ಲಿ ಆತ ಅಡಿಗೆಗೆ ಉಪ ಯೋಗಿಸುವ ಸೊಪ್ಪು ಇಂಥದ್ದೇ ಇರಬೇಕೆಂದು ಅದನ್ನು ಬಾಯಿಗೆ ಹಾಕಿ ಕೊಂಡಾಗ ಗೊತ್ತಾಗುತ್ತದೆ.

*    *    *

ಬೆಂಗಳೂರಿಂದ ಕಪಿಗಳನ್ನು ಅಮೇರಿಕಾ ದೇಶಕ್ಕೆ ಕಳುಹಿಸಲಾಗುತ್ತೆ. ಎಂಬ ಸುದ್ದಿಯನ್ನು ಪ್ರಕಟಿಸಿದಲಾಗಾಯ್ತು, ಸದರಿ ಕಪಿಗಳಿಗೆ, ತಾವೇ ಸೇತುವೆ ನಿರ್ಮಾಣ ಮಾಡಿಕೊಂಡು ಹೋಗಬೇಕೆ, ಎಂಬ ಚಿಂತೆ ಹತ್ತಿದೆಯಂತೆ.

*    *    *

ಕಾವ್ಯವೆಂದರೇನು, ಎಂಬ ಪ್ರಶ್ನೆಗೆ ಇನ್ನೂ ಸಮರ್ಪಕವಾದ ಉತ್ತರ ದೊರೆ ತಿಲ್ಲ (ಲೇಖನ) ಹೇಗೆ ದೊರೆಯುತ್ತದೆ? ಕವಿಗಳಿಗೆ ನಾಚಿಕೆ, ವಿಮರ್ಶಕರಿಗೆ ಅಂಜಿಕೆ.

*    *    *

ತಾನು ಕೊಂದು ಹಾಕಿದ ಮನುಷ್ಯನ ದೇಹದಮೇಲೆ ನಿಂತು ಒಂದು ಹುಲಿ, ಅವನ ಆಪಾದಕೇಶ ಅಳತೆಯನ್ನು ಕಾಡಿಗೆಲ್ಲ ಜಂಬದಿಂದ ಸಾರಿ ಹೇಳುತ್ತಿತ್ತಂತೆ.

*    *    *

ತಾನೇ ದುಡಿದು ಶೇಖರಿಸದೆ ಹಠಾತ್ತಾಗಿ ಎಲ್ಲಿಂದಲೋ ಹಣಬಂದು ಶ್ರೀಮಂತ ನಾಗುವುದು ತುಂಬ ಅಪಾಯ ಪ್ರಸಂಗ (ಭಾಷಣ)....ಆದರೆ, ಎಂಥ ಅಪಾಯಕ್ಕೂ ನಾವು ತಲೆ ಕೊಡಲು ಸದಾ ಸಿದ್ಧರಿದೇವೆ.

*    *    *

ದೇಶದ ದುಃಸ್ಥಿತಿಗೆ ಯಾರು ಕಾರಣರು ಎಂದು ನಿರ್ದಿಷ್ಟವಾಗಿ ಹೇಳುವುದು ಎಲ್ಲಿ ಅಸಾಧ್ಯವೋ ಆ ದೇಶದಲ್ಲಿ ಪ್ರಜಾಪ್ರಭುತ್ವ ಸಂಪೂರ್ಣ ಪ್ರಚಾರದಲ್ಲಿದೆ ಎಂದರ್ಥ.

*    *    *

---

# ಕೊರವಾವಲೋಕನ

---

ಸುಮಾರು ಮೈಕಟ್ಟಿನ, ಸ್ವಯಂಕೃತ ಬಟ್ಟೆಯ ಜುಬ್ಬ ಧರಿಸಿದ, ತನ್ನ ಹಿರಿಯಾಯುಧವನ್ನೇ ತಲೆಗೆ ಧರಿಸಿದ್ದ ಬಬ್ಬಾತ ಕೊರವನ ಕೈಕುಲುಕಿ ವಂದನೆ ಹೇಳಿ, ಕ್ಲಬ್ಬಿನಿಂದ ಹೊರ ಹೊರಟಿದ್ದ. ನಾನು ಕೊರವನ ಮೇಜಿನ ಹತ್ತಿರ ಹೋದಾಗ ಅವ ತನ್ನ ಕೈಕೊಡವಿಕೊಳ್ಳುತ್ತಿದ್ದ. "ಯಾರಯ್ಯಾ? ನಿನ್ನ ದೋಸ್ತು" ಎನ್ನುವಂತೆ ಇತ್ತಲಿಂದ ಹೋದವನ ದಿಕ್ಕಿಗೆ ಕಣ್ಣು ಆಡಿಸಿ ರೆಪ್ಪೆ ಎತ್ತಿದೆ.

"ಅವನೇ! ನಮ್ಮ ಜೋಡಿಗ್ರಾಮದ ತೇನ್‌ಸಿಂಗ್ ಅವ" ಎಂದ. ಕೊರವ ಮುಗುಮ್ಮಾಗಿ.

ಕೊರವನ ಜೋಡಿಗ್ರಾಮದಲ್ಲಿ ಒಂದು ಬಂಡೆ ಕೂಡ ಇಲ್ಲ. ಬೆಟ್ಟ ಹಾಗಿರಲಿ! ಗುಡ್ಡ ಹಾಗಿರಲಿ! ದೊಡ್ಡಮರ ಅಂದರೆ ಪರಂಗಿಹಣ್ಣಿನಮರ. ಇನ್ನು ಅಂತಹ ಕುಗ್ರಾಮದಲ್ಲಿ ಏನನ್ನುತಾನೆ ಹತ್ತಿ 'ತೇನ್‌ಸಿಂಗ್' ಎಂಬ ಹೊಗಳಿಕೆಗೆ ಪಾತ್ರನಾದ, ಈಗ ಹೊರಬಿದ್ದ ಕಂಚಿಯ ಧಡಿಯನಾದ ಆಗಂತುಕ, ಎಂದು ನನಗೆ ಆಶ್ಚರ್ಯ.

ಮನಸ್ಸಿನ ಉದ್ವೇಗಗಳು ಮುಖದಲ್ಲಿ ಕಾಣಬರುವುದಂತೆ ಅದಕ್ಕೇ ನಮ್ಮೂರ ಜನರ ಮುಖ ಹಾಳುಸುರಿಯುತ್ತಿವೆ ಎಂದು ಹಿರಿಯರು ಹೇಳಿದ್ದು ದಿಟವಿರಬೇಕು. ಈ ಯೋಚನೆಗಳು ನನಗೆ ತೋರಿದಾಗ ಕೊರವ ನನ್ನ ಮುಖದ ಇಂಗಿತದಲ್ಲೇ ಇದನ್ನು ಕಂಡುಕೊಂಡು, ಉತ್ತರ ಹೇಳಿದ.

"ನಮ್ಮಗ್ರಾಮದ ತೇನ್‌ಸಿಂಗ್ ಮರಗಿಡ, ಬೆಟ್ಟಗುಡ್ಡ ಹತ್ತಲಿಲ್ಲ ಆದರೆ ಜೀವನದ ಮೆಟ್ಟಲುಗಳನ್ನು ಎರಡು ಮೂರು ಒಂದೊಂದಡಿಗೆ ಹಾಕುತ್ತಾ ಹತ್ತಿದ. ಈಗ ಗ್ರಾಮದ ಮುಖ್ಯಸ್ಥನಾಗಿದ್ದಾನೆ. ಕಂಡವರ ಕೆಲಸದಮೇಲೆ ತಾನು ಯಶಸ್ಸನ್ನು ಸಂಪಾದಿಸಿ ಮೇಲ ಮೇಲಕ್ಕೆ ಹತ್ತಿದ್ದಾನೆ ಅದಕ್ಕೇ ಅವನನ್ನು ನಾನು ತೇನ್‌ಸಿಂಗ್ ಎಂದೇ ಕರೆಯುತ್ತೇನೆ" ಎಂದ 'ಅದು ಹೇಗೋ' ಎಂದೆ. ಕೊರವ ವಿವರಿಸಿದ.

ವಿಜಯನಗರದ ಕಾಲದಲ್ಲಿ ರಾಜರುಗಳು ಪಲವಾರು ಪಾಳೆಯಗಾರರನ್ನು ನೇಮಿಸುತ್ತಿದ್ದರು. ಈ ಪಾಳೆಯಗಾರರು ಒಂದೊಂದು ಪಾಳ್ಯದಲ್ಲೂ ತಮ್ಮ ಅಧಿಕಾರ ಚಲಾಯಿಸಿ, ರಾಜರುಗಳಿಗೆ ಇಷ್ಟಿಷ್ಟು ಹಣ ಇಷ್ಟಿಷ್ಟು ದನಕರುಗಳು, ಇಷ್ಟಿಷ್ಟು ಸೈನಿಕರು, ಅಂತ ವರ್ಷಕ್ಕೊಮ್ಮೆ ಕಾಣಿಕೆ ಕೊಡುತ್ತಿದ್ದರು. ಇಷ್ಟು

ಕೊಟ್ಟ ಪಾಳೆಯಗಾರರ ತನ್ನ ಪಾಳೆಯದಲ್ಲಿ ನಿರಂಕುಶ ಪ್ರಭುವಾಗಿ ಮೆರೆಯುತ್ತಿದ್ದ. ಪಾಳೆಯದವರ ಕಷ್ಟಸುಖವೆಲ್ಲಾ ತನ್ನದೇ, ಪಾಳೆಯದವರ ಮಕ್ಕಳೆಲ್ಲಾ ತನ್ನದೇ, ಪಾಳೆಯದವರ ಚೆಂದಾದ ಹೆಂಡಿರೆಲ್ಲಾ ತನ್ನದೇ ಎಂದು ನಡೆದುಕೊಳ್ಳುತ್ತಿದ್ದ.

ಆದರೆ ಈಗ ಕಾಲಬದಲಾಯಿಸಿತು. ರಾಜರು ಬರೀ ಚಿಹ್ನಾರೂಪ ಈಗ ಆಡಳಿತವಾಡುವವರು ದೇಶದಲ್ಲೆಲ್ಲಾ ಹಲವಾರು ಪಾಳೆಯಗಾರರನ್ನು ನೇಮಿಸಿ ಕೊಂಡಿದ್ದಾರೆ. ಈ ಪಾಳೆಯಗಾರರು ಆಡಳಿತದವರಿಗೆ ಚುನಾವಣಾ ಕಾಲಕ್ಕೆ ಇಷ್ಟಿಷ್ಟು ವೋಟುಗಳನ್ನು ಕೊಡಬೇಕು ಎಂದು ಅಂಗೀಕಾರ ಇರುತ್ತೆ. ಅಷ್ಟು ಸರಬರಾಜು ಮಾಡಿದರೆ ಸಾಕು, ಮಿಕ್ಕೆಲ್ಲ ವಿಷಯದಲ್ಲಿ ನಿರಂಕುಶರಾಗಿ ಬಾಳಿ ಬದುಕಬಹುದು.

ಈ ಮರ್ಮವನ್ನು ಕಂಡ ನಮ್ಮ ಗ್ರಾಮದ ತೇನ್‌ಸಿಂಗ್ ಹುಡುಗನಾಗಿ ನಿಂದಲೂ ಜನರ ವೋಟು ಬೇಟೆಯಾಡುವುದನ್ನೂ ವೋಟು ಶೇಖರಿಸುವುದನ್ನೂ ಚೆನ್ನಾಗಿ ಕಲಿತ. ಜತೆಯಹುಡುಗರೆಲ್ಲಾ ಬಿ. ಎ. ಬಿ. ಇ. ಬಿ. ಟಿ. ಹೀಗೆ ಡಿಗ್ರಿ ಪಡೆಯುತ್ತಿದ್ದಾಗ ಈತ ಓದದೆ ಬರೆಯದೆ ಹಲವಾರು ಪ್ರಯೋಗಗಳನ್ನು ನಡೆಸಿ ವೋಟು ಶೇಕರಣ ಶಾಸ್ತ್ರಿಯಾದ. ಜತೆಯವರೆಲ್ಲರೂ ತಲೆಗೆ ರುಮಾಲು ಭಾರ ಹೊತ್ತು ೪೦-೧-೪೦೦ರ ಚಾಕರಿಗೆ ಸೇರಿದಾಗ, ಈತ ಗ್ರಾಮದ ಪಾಳೆಯಗಾರನಾಗಿ ಬೇಕಾದ ಸೌಕರ್ಯಗಳನೆಲ್ಲಾ ಅನುಭವಿಸುವಂತಾಗಿದ್ದಾನೆ. ಒಂದುಕಾಸು ಸಂಬಳ ವಿಲ್ಲ. ಒಂದು ಗ್ರೇಡು ಇಲ್ಲ ಆದರೆ ರಾಜ ಭೋಜನ ಮಹಾರಾಜನ ಒಡ್ಡೋ ಲಗ, ಚಕ್ರವರ್ತಿಯ ಚೇಷ್ಟೆ, ಇಂದ್ರಸಭೆ, ನಡೆಸುತ್ತಾ, ಸುಖವಾಗಿ ಕಾಲ ಹಾಕು ತ್ತಿದ್ದಾನೆ.

ಅವರಿವರ ವೋಟಿನ ಏಣಿಯನ್ನು ಹತ್ತಿ ಹತ್ತಿ ಗೌರೀಶಂಕರವನ್ನೇ ಕಡೆಗೆ ಮುಟ್ಟುತ್ತಾನೆ ತೇನ್‌ಸಿಂಗ್. ಅದಕ್ಕೇ ಎದುರಿಗೆ ನಯವಿನಯವಾಗಿರುತ್ತೇನೆ, ಮುಂದಕ್ಕೆ ಪ್ರಯೋಜನವಾಗಬಹುದು ಎಂದು, ಆದರೂ ಕೈಕುಲುಕಿದಮೇಲೆ ಆ ಪಾಪಕಳೆದುಕೊಳ್ಳಲು ಕೈತ್ತೊಳೆದುಕೊಳ್ಳಲೇಬೇಕು ಎಂದ ಕೊರವ.

ಆಗ ನನಗನ್ನಿಸಿತು—ಹೌದೇ!—ಆಗಿನ ಕಾಲಕ್ಕೂ ಈಗಿನ ಕಾಲಕ್ಕೂ ಏನು ವ್ಯತ್ಯಾಸ—ಆಗ ಬಿಲ್ಲುಬಾಣ ಗುಂಡು ಫಿರಂಗಿ, ಸೈನಿಕ ರಾವುತ—ಈಗ ಬರೀ ವೋಟು, ವೋಟು, ವೋಟು. ಇದಲ್ಲದೆ ಬೇರೆ ವ್ಯತ್ಯಾಸವುಂಟೇ?

"ಇಲ್ಲಾ ಸಾರ್" ದೋಸೆಹಿಟ್ಟು ಮುಗಿದುಹೋಯಿತು ಅಂತ ಕ್ಲಬ್ಬಿನ ಸೇವಕ ಬಂದು ಹೇಳಿದ.

ಅವನಿಗೆ ಗೊತ್ತು ದೋಸೆ ಕ್ಲಬ್ಬಿನಲ್ಲಿ ಮಾಡಿದ ದಿನ ನಾನು ತಿನ್ನದೆ ಹೊರ ಬರುಲ್ಲ ಅಂತ. ಅದಕ್ಕೇ ಈ ಮುನ್ನೆಚ್ಚರಿಕೆ. ಹಾಗೂ ನನ್ನ ಪ್ರಶ್ನೆಗೆ ಉತ್ತರ.

—ಬಚ್ಚ, ಬಿ.ಎ.,ಬಿ.ಇ.,ಬಿ.ಟಿ.,

# ಯಾತ್ರಿಕರ ಪತ್ರ

೧೨

---

"'ಚಂದಾಪುರ'-ಹೆಸರು ಬಲು ಚನ್ನ" ಅಂದ ರಾಜ.

"ಮೈನ್‌ರೋಡಿನಿಂದ ಮೂರುಮೈಲು" ಅಂತ ಓದಿದ ಚಂದಿ ಅಲ್ಲಿದ್ದ ಕಲ್ಲಿನ ಮೇಲೆ.

"ಒಳದಾರೀಲಿ ಎಳ್ಡೇಮೈಲು ಬುದ್ಧಿ, ಕಿರಲುಕೋಡಿನಮ್ಯಾಗೆ" ಅಂದ ಅಲ್ಲಿ ನಿಂತಿದ್ದ ಒಬ್ಬ ಹಳ್ಳಿಗ.

ನಾನಂದೆ- "ಚಂದಾಪುರಕ್ಕೆ ಬೇಕಾದರೆ ಹೋಗೋಣ- ಮೈನ್‌ರೋಡಿನಲ್ಲಿ. ವಳದಾರೀಲಿ ಬೇಡ" ಅಂತ.

ಅದಕ್ಕೆ ಚಂದಿ "ಕಿರಲುಕೋಡು ಸಿಗೋಲ್ಲವಲ್ಲ!" ಅಂದ.

ನಾನದಕ್ಕೆ "ಕಿರಲುಕೋಡಿನಲ್ಲಿ ನಿಮ್ಮ ನೆಂಟರ್‍ಯಾರಾದರೂ ಇದ್ದಾರೆಯೇ?" ಅಂದೆ. —(ಉತ್ತರವಿಲ್ಲ.)

ನಾನು ಪುನಹ ಹೇಳಿದೆ—"ವಳದಾರೀಲೇ ಹೋಗೋಣ. ಚೆನ್ನಾಗಿ ಹಾದಿ ವಿಚಾರಿಸಿ. ಈ ಸಾರಿ ರಾಜ ಹಾದಿ ತೋರಿಸಲಿ-ನೀನು ಬೇಡ" ಅಂತ.

ನನಗೆ ಚಂದಿ ವಿಷಯದಲ್ಲಿ ಭರವಸೆ ತಪ್ಪಿತ್ತು; ಹಿಂದೆ ಅವನು ಯಾವನೊ ನೆಂಟನ ಮನೆಗೆ ಕರೆದುಕೊಂಡು ಹೋದಾಗಿನಿಂದ ಅವನ ಬಗ್ಗೆ ನನಗೆ ಹೆದರಿಕೆ. ಆದರೂ ಚಂದೀಗೆ ಈಗ ನಾನು ಕಂಡದ್ದನ್ನು, ಅನುಭವಿಸಿದ್ದನ್ನು ಹೇಳಿದ್ದಕ್ಕಾಗಿ ಅವನು ಕೆಂಡಕಾರುತ್ತ ತನ್ನ ವಾಹನವನ್ನು ಹಿಂದಕ್ಕೆ ಸರಸುತ್ತಾ ರಾಜನಿಗೆ ಹಾದಿ ಮಾಡಿಕೊಟ್ಟ. ನನಗೆ ಮನಸ್ಸು ತುಸ ಕಸಿವಿಸಿಯಾಯಿತು. ಆದರೂ ಸುಮ್ಮನಿದ್ದೆ.

ರಾಜ-ಅದೇ ಹಳ್ಳಿಗನ ಹತ್ತಿರ ಕಿರಲುಕೋಡಿಗೆ ಹಾದಿ ವಿಚಾರಿಸಿ ಅಲ್ಲಿಂದ ಚಂದಾಪುರಕ್ಕೂ ಹೋಗುವ ಹಾದಿಯನ್ನೂ ತಿಳಿದುಕೊಂಡಮೇಲೆ, ಮುಂದೆ ಹೊರಟೆವು. ಕಿರಲುಕೋಡಿನವರಿವಿಗೂ ಮೈನ್‌ರೋಡಿನಲ್ಲೇ ಹೋಗಬೇಕಾದದ್ದರಿಂದ ಸುರಕ್ಷಿತವಾಗಿ ಸೇರಿದೆವು. ಚಂದೀ ಕೂಡ ಆ ಹಾದಿಯಲ್ಲಿ ಸುರಕ್ಷಿತವಾಗಿ ಸೇರಿಸುತ್ತಿದ್ದನೆಂದು ನನಗೆ ತೋರಿತು. ಹಳ್ಳಿಯವರ ಲೆಕ್ಕದ ದೂರ-ಕಿರಲುಕೋಡಿಗೇ ನಾವು ಐದುಮೈಲಿ ನಡೆದಷ್ಟು ಸುಸ್ತು.

ಕಿರಲುಕೋಡು, ನಮ್ಮ ಇತರೇ ಹಳ್ಳಿಗಳಂತೆಯೇ ತಂಬಾಕು ಮಿಶ್ರ ಅಡಿಕೆಲೆ ಎಂಜಲಿಂದ ಸಾರಿಸಿದ ರಸ್ತೆಗಳು, ಮನೆಗಳಮುಂದೆ ಬಚ್ಚಲು, ಮನೆಗಳ ಹಿಂದೆ ಹಿತ್ತಲು, ಹಿತ್ತಲು ಮಧ್ಯೆ ಬೃಂದಾವನ, ಬೃಂದಾವನಕ್ಕೆ ಸಗಣಿ ಗೊಬ್ಬರ, ಗೊಬ್ಬರದ ರಾಶಿ ಮನೆಯ ಸುತ್ತ, ಅವುಗಳಮೇಲೆ ಆಡುವ ಬೆತ್ತಲೆ ಮಕ್ಕಳು - ಮುಂದೆ ನಮ್ಮ ನ್ನಾಳುವ ಮಕ್ಕಳು! - ಗೊಬ್ಬರದ ಮಧ್ಯೆ ಕುಡಿಯುವ ನೀರಿನ ಭಾವಿ - ಇವು ಬಡ ಬೋರೆಗೌಡನ ಊರು! ಆತನ ಹೆಸರಿನಲ್ಲಿ ಕಣ್ಣೀರು ಸುರಿಸಿ ರಾಜ್ಯ ಕಟ್ಟಿ, ಆಳುತ್ತ ಸೌಧಗಳನ್ನ ನಿರ್ಮಾಣಮಾಡುತ್ತಾರೆ - ಸೌಧಗಳಿಂದ ಕತ್ತಲೆ ಮುಚ್ಚಿರುವ ಪಟ್ಟಣ ಗಳಲ್ಲಿ! ಕಿರಲುಕೋಡಿನಲ್ಲಿ ಒಂದು ದೇವಸ್ಥಾನ - ಬಹಳ ಪುರಾತನವಾದದ್ದೆಂದು ಹೆಸರು. ದಿನಕಳೆದಂತೆಲ್ಲಾ ಅದರ ಪ್ರಶಸ್ತಿ ಹೆಚ್ಚಿ, ಕಟ್ಟಿದಾಗ ಒಬ್ಬ ಬಡ ಪೂಜಾರಿಯ ಜೀವನವನ್ನು ಮಾತ್ರ ನಡಿಸುವುದಕ್ಕೆ ಲಾಯಖಾದ ಗುಡಿ. ಬರುಬರುತ್ತ ಇಡೀ ಜನರು ಕಟ್ಟಿಕೊಂಡ ಪಾಪಗಳ ಹೊರೆಯನ್ನೆಲ್ಲಾ ಇಳಿಸುವುದಕ್ಕೆ ಶುರುಹಚ್ಚಿತ್ತು! ಹಾಗಾಗಿ ಭಕ್ತರು ತಮ್ಮ ಪಾಪವನ್ನೆಲ್ಲಾ ಆ ಗುಡಿಯಲ್ಲಿ ಬಂದು ಕಳೆದು, ಹೋಗು ವಾಗ ದೇವರ ವಿಗ್ರಹಕ್ಕೇ ಬಳಿದು ಹೋಗುವಂತಿತ್ತು. ಮೂರ್ತಿಯೇ ಕಾಣದಾಗಿತ್ತು. ನಾವೂ ಆ ಗುಡಿಗೆ ಹೋದೆವು. ಭಕ್ತರ ಧಾಳಿಯನ್ನೆಲ್ಲಾ ಶಾಂತರೀತಿಯಲ್ಲಿ ಅನು ಭವಿಸಿ ಅವರ ಪಾಪವನ್ನೆಲ್ಲಾ ತಾನೇ ಹೊತ್ತು ನರಳಿ ಕುಗ್ಗಿದ ಆ ಮೂರ್ತಿಯನ್ನು ನೋಡಿ ನಮಸ್ಕರಿಸಿ ಹೊರಗೆ ಬಂದೆವು.

ಪಟೇಲರ ಭೇಟಿಯಾಯಿತು. ಅವರ ಮೂಲಕ ಊರಿನ ಪ್ರಮುಖರ ಭೇಟಿ ಯಾಯಿತು. ಫಲಹಾರವಾದನಂತರ ಚಂದಾಪುರಕ್ಕೆ ಹೊರಡಲು ಸಿದ್ಧರಾದೆವು. ಪಟೇಲರು - ಕಿರಲುಕೋಡಿನಿಂದ ಚಂದಾಪುರಕ್ಕೆ ದಾರಿ ಕಷ್ಟವೆಂದೂ, ಒಬ್ಬ ಆಳನ್ನು ಕೊಡುತ್ತೇನೆಂದೂ ಹೇಳಿದರು. ಆದರೆ ಚಂದಿ ಒಪ್ಪಲಿಲ್ಲ. ರಾಜನಿಗೆ ಜವಾಬ್ದಾರಿ ಕೊಟ್ಟಮೇಲೆ ಅವನೇ ತೋರಿಸಲಿ ಅಂತ ಸಾಧಿಸಿದ. ಮೂವರೂ ಹೊರಟೆವು. ರಾಜ - ಮುಂದೆ, ನಾನು ಹಿಂದೆ, ನನ್ನ ಹಿಂದೆ ಚಂದಿ. ಮೂರು ದಿನಗಳ ಹಿಂದೆ ಮಳೆಬಿದ್ದು ನೆಲ ನೆಂದಿದೆ. ಆದರೂ ರಾಜ ಕಷ್ಟಪಟ್ಟು ಹಾದಿ ತೋರಿಸುತ್ತಾ ನಡೆಯುತ್ತಿದ್ದಾನೆ. ವಾಹನಗಳಮೇಲೆ ಕೂರುವಂತಿಲ್ಲ. ಸುಮಾರು ಎರಡು ಘಂಟೆ ಗಳಕಾಲ ಸುತ್ತಾಡಿ, ಪಟೇಲರು ಹೇಳಿದ ಕಾಲುದಾರಿಗಳನ್ನೇ ಹಿಡಿದು ಕಾಲಿಟ್ಟು ನಡೆಯುತ್ತ ಒಂದು ಹಳ್ಳಿಗೆ ಸೇರಿದೆವು.

"ಚಂದಾಪುರ - ಸಿಕ್ಕಿತು" ಅಂದ ರಾಜ ಬೆವರೊರಸಿಕೊಳ್ಳುತ್ತಾ.

ಊರ ಮುಂದೆ ಒಂದು ದೇವಸ್ಥಾನ. ಅದರ ಹಿಂಭಾಗದಲ್ಲಿ ನಾವು ಇದ್ದೇವೆ. ಒಂದು ಸುತ್ತುಹಾಕಿ ಮುಂಬಾಗಿಲಿಗೆ ಬಂದೆವು.

ರಾಜ ಅಂದ "ಈ ದೇವಸ್ಥಾನಗಳೆಲ್ಲಾ ಒಂದೇ ಕಾಲದ್ದು. ನೋಡ್ರೋ ಶಿಲ್ಪಿ ಕೆಲಸ ಒಂದೇ ತರಹ ಇದೆ" ಅಂತ. ನಾನಂದುಕೊಂಡೆ ರಾಜನಿಗೆ ಆದೇನೋ

ಹೇಳ್ತಾರಲ್ಲಾ ಭೂಗರ್ಭಶಾಸ್ತ್ರವೋ, ಅಥವಾ ಅರ್ಥಶಾಸ್ತ್ರವೋ ಸ್ವಲ್ಪ ಗೊತ್ತಿರಬೇಕು ಅಂತ.

ಚಂದಿ " ?....!....?....! " ಅಂದ.

ತುಸಹೊತ್ತಾದಮೇಲೆ ರಾಜನಕಡೆ ತಿರುಗಿ "ನಿನ್ನ ತಲೆಕಾಯಿ! ಇದು ಕಿರಲುಕೋಡಿನ ದೇವಸ್ಥಾನ! ಮುಂಬಾಗಿಲಿಂದ ಹೊರಟು ಐವತ್ತು ಮೈಲಿ ಸುತ್ತಿಸಿ ಹಿಂಭಾಗಕ್ಕೆ ಕರೆದುಕೊಂಡು ಬಂದಿದ್ದೀ!" ಅಂತ ಕೂಗಿದ.

ರಾಜ ಅದಕ್ಕೆ "ಏನಲ್ಲ - ಇದು ಚಂದಾಪುರ!" ಅಂದ.

ಅಷ್ಟರಲ್ಲಿ ನಾವು ಹಿಂದೆ ಅಲ್ಲೇ ತಿಂದಿದ್ದ ತಿಂಡಿಚೂರುಗಳು ಸಿಕ್ಕಿದವು. ಅವು ಕಂಡ ಕೂಡಲೇ ನನಗೆ ಅರ್ಥವಾಯಿತು.

ರಾಜ "ಲ್ರೋ–Excuse me, I say! ಎಲ್ಲೋ ದಾರಿ ತಪ್ಪಿತು" ಅಂದ.

ಪುನಹ ಮರುಮಾತಾಡದೆ ಯಾರ ಕಣ್ಣಿಗೂ ಬೀಳದೆ ಹೊರಟೆವು. ರಾಜ ಈ ಸಾರಿ ಸರಿಯಾಗಿ ದಾರಿ ತೋರಿಸುವ ಭರವಸೆ ಇತ್ತಿದ್ದ. ನಾವು ಬಹಳ ಸುತ್ತಲಿಲ್ಲ. ಐದು ಹಳ್ಳಗಳನ್ನು ದಾಟಿ, ಏಳು ಬೇಲಿಗಳನ್ನ ಹಾರಿ, ಮೂರು ಹೊಲಗಳನ್ನು ಕುಂಟಿದಮೇಲೆ ಚಂದಾಪುರದ ದಿವ್ಯ ದೇವಸ್ಥಾನಕ್ಕೆ ಬಂದು ಸೇರಿದೆವು.

ಚಂದಿ - "ಪರವಾಗಿಲ್ಲ ಈ ಸಾರಿ ಬಲಗಡೆಯಿಂದ ಬಂದಿದ್ದೇವೆ. ಇನ್ನು ಎಡಗಡೆಯಿಂದ ನೋಡಿಬಿಟ್ಟರೆ ಪೂರ್ತಿ ನೋಡಿದ ಹಾಗಾಯಿತು" ಅಂದ.

ನಾನು ರಾಜನ್ನ ನೋಡಿದೆ. ಏನೂ ಮಾತಾಡಲಿಲ್ಲ. ನಮ್ಮೆದುರಿಗೇ ನಾವು ಎರಚಿದ್ದ ತಿಂಡಿ ಚೂರುಗಳು ಬಿದ್ದಿವೆ. ಚಂದಿ ಮುಷ್ಕರ ಹೂಡಿದ.

"ಬೇಕಾದರೆ ನೀವಿಬ್ಬರೂ ಇನ್ನೊಂದುಸಲ ಸುತ್ತಿ ಬನ್ನಿ. ನಾನಿಲ್ಲೇ ನಿಮಗೆ ಕಾದಿರುತ್ತೇನೆ" ಅಂದ. ಅಲ್ಲಿಯೇ ಕೂತ.

ಚಂದೀದು ಹಲ್ಲೀ ಶಕುನ. ನಾನು ರಾಜ ಅವನನ್ನು ಬಿಟ್ಟು ಹೊರಟೆವು. ಅವನಿಗೆ ಒಂದುಬಾರಿ ಪಾಠ ಕಲಿಸಬೇಕೆಂಬ ಆಶೆ. ನಾನು ರಾಜ ಬಹಳ ಎಚ್ಚರಿಕೆಯಿಂದ ಚಂದಾಪುರದ ದಿಕ್ಕಿನಲ್ಲೇ ಹೊರಟೆವು. ಚಾಚೂ ತಪ್ಪದೆ ನಡೆದೆವು. ಮನಸ್ಸು ಶರೀರ ಇವೆರಡೂ ಹಗುರವಾಗಿದ್ದ ಹಾಗಿದ್ದು–ಪ್ರಾಯಶಃ ಕಿರಲುಕೋಡಿನ ದೇವರು ನಮ್ಮ ಪಾಪದ ಭಾರವನ್ನೂ ಹೊತ್ತಿರಬೇಕು! ಒಂದು ಮೈಲಿ ನಡೆದಷ್ಟು ಕೂಡ ನಮಗೆ ತೋರಲಿಲ್ಲ–ದೇವಸ್ಥಾನದ ಎಡಪಾರ್ಶ್ವ ಕಾಣಿಸಿತು.

ಚಂದಿ ಅಷ್ಟರಲ್ಲಿ ಪಟೇಲರ ಕಡೆಯ ಒಬ್ಬ ಆಳನ್ನು ಕರೆಸಿದ್ದ. ಆತನ ಜೊತೆ ಮಾಡಿಕೊಂಡು ಚಂದಾಪುರ— ದೇವಸ್ಥಾನ ಕಾಣಿಸಲಿಲ್ಲ — ನಿಜಕ್ಕೂ ಚಂದಾಪುರ ತಲುಪಿದೆವು.

—"ಶೇಷ"

——•——

# ೧೯೭೬ನೆ ಇಸವಿ

ಮ್ಯಾಜಿಸ್ಟ್ರೇಟರು ಅಪರಾಧಿಯಕಡೆ ಎರಡುನಿಮಿಷ ದುರುಗುಟ್ಟಿದರು. "ನೀನು ಮಾಡಿದ ಅಪರಾಧವನ್ನು ಮರೆಮಾಚಲು ಬಾಯಿಗೆ ಬಂದಹಾಗೆ ಏನೇನೋ ಹರಟು ತ್ತೀಯಾ? ಅರವತ್ತನೆಯ ದಶಕದಲ್ಲಿ ಕಾಲಿಟ್ಟಿರುವ ನಮ್ಮ ದೇಶ ಎಷ್ಟು ಮುಂದುವರಿ ದಿದೆ ಎಂಬುದನ್ನು ನೀನಿನ್ನೂ ತಿಳಿದಿಲ್ಲ. ದೇಶದ ಪ್ರತಿ ಒಬ್ಬನ ಪ್ರತಿಯೊಂದು ಚಲನವಲನವೂ ಕಾನೂನಿಂದ ನಿರ್ಭಂಧಿತವಾಗಿರುವಾಗ . ...."

ಆಗ ಅಪರಾಧಿ, "ನನ್ನ ಮಗನನ್ನು ನಾನು" ಎಂದು ಮಾತು ಪ್ರಾರಂಭಿಸಿದ.

ಮ್ಯಾಜಿಸ್ಟ್ರೇಟರು ರೇಗಿದರು. "ಸಾಕು, ನಿಲ್ಲಿಸು! ನಿನ್ನ ಮಗ? ನಿನ್ನ ಮಗನೇ ಅವನು? ದೇಶದ ಮಗ. ಮಕ್ಕಳೆಲ್ಲರೂ ದೇಶದ ಮಕ್ಕಳು, ಎಂಬ ಕಾನೂನನ್ನು ಉಲ್ಲಂಘಿಸಿ.... . "

"ಇಲ್ಲ, ಮಹಾಸ್ವಾಮಿ, ಮನೆಯಲ್ಲಿ ಕೊಂಚಹೊತ್ತು ಪುಸ್ತಕ ಹಿಡಿದು ಓದು ಎಂದು ...."

"ಹಾಗೆ, ಮಕ್ಕಳನ್ನು ನಿರ್ಭಂಧಿಸುವುದು ಶಿಕ್ಷಣಶಾಸ್ತ್ರಕ್ಕೆ ವಿರೋಧವೆಂಬುದನ್ನರಿಯೆಯಾ? ಮಕ್ಕಳು ಅವರಿಗೆ ಮನಬಂದಂತೆ ಮನಬಂದಾಗ ಮನಬಂದಷ್ಟು ಓದ ಬೇಕು. ಸ್ವಾತಂತ್ರ್ಯ ಅಂದರೆ ಅದು. ಅವರನ್ನು ಓದಿಸುವುದಕ್ಕೆ ಸರ್ಕಾರದಿಂದ ನೇಮಿತರಾದ ಶಿಕ್ಷಕರಿದ್ದಾರೆ. ನೀನು ಅವರಿಗಿಂತ ಪ್ರವೀಣನೆ? ಅವರಷ್ಟು ಸಮರ್ಥನೆ? ಅವರು ಆ ಮಗುವನ್ನು ತಿಳಿದಿರುವುದಕ್ಕಿಂತ ಹೆಚ್ಚಾಗಿ ನೀನು ತಿಳಿದಿರುವೆಯಾ?"

"ಆದರೂ, ಮನೆಯಲ್ಲಿ ವೃಥಾ ಕಾಲಹರಣಮಾಡುವುದಕ್ಕಿಂತ .. ...."

"ಮನೆಯಲ್ಲಿ ಆ ಮಗು ನಿನ್ನ ಪೋಷಣೆಯಲ್ಲಿರುವುದು ಕೇವಲ ನಿನ್ನ ಲಾಲನೆಗಾಗಿ; ನೀನು ಅದರಿಂದ ಪಾಠ ಕಲಿಯುವ ಸಲುವಾಗಿ ... ಅದಕ್ಕೆ ಬದಲು ನೀನು, ನಿನ್ನ ದುರಹಂಕಾರದಿಂದ, ಅದನ್ನು ಅದರ ಇಷ್ಟದಂತೆ ನಿನಿಮಾಗೆ ಹೋಗಬಿಡದೆ, ಓದು ಎಂದು ಬಲವಂತಪಡಿಸಿದೆಯಾ, ಮೂರ್ಖಾ!"

"ಹನ್ನೆರಡುವರ್ಷ ವಯಸ್ಸಾದರೂ ಅವನಿಗಿನ್ನೂ ಓದು ಚೆನ್ನಾಗಿ ಬರದು, ಮಹಾಸ್ವಾಮಿ"

"ಹಾಗೆಂದು ಟೀಕಿಸಲು ನೀನು ಯಾರು? ನಿನ್ನ ಅಧಿಕಾರವೇನು? ಅದಕ್ಕಾಗಿ ನೇಮಕವಾಗಿರುವ ಶಿಕ್ಷಣವೇತ್ತರು ಅದೇ ಸರಿ ಅದೇ ಪ್ರಗತಿ ಎನ್ನುವಾಗ, ನೀನು ಅವರನ್ನು ದೂಷಿಸುವುದು ಮತ್ತೊಂದು ಅಪರಾಧ"

"ಕನ್ನಡ ಅಕ್ಷರಗಳನ್ನಾದರೂ ಅವನು ಸರಿಯಾಗಿ ಓದಿ ಬರೆದು...... "

"ಏನು? ಕನ್ನಡ ಅಕ್ಷರಗಳು ಎಷ್ಟು, ಎಂಥವು, ಅವು ಹೇಗೆ ಬರೆದರೆ ಸರಿ, ಎಂಬುದನ್ನೆಲ್ಲ ಸರ್ಕಾರ ಸಮಿತಿಯೇ ರಚಿಸುತ್ತದೆ.... ಅದರ ಪ್ರಕಾರ...."

"ನನಗೆ ತೋರಿದಂತೆ...., ಮಹಾಸ್ವಾಮಿ.... ನಾನು...."

"ನಿನಗೆ ತೋರಿದಂತೆ ನೀನು ಹೇಳಿಕೊಡುವಿಯೇನು? ಅದು ಮತ್ತೊಂದು ಅಪರಾಧ....ಅದಕ್ಕೂ ಒಂದು ತಿಂಗಳು ಸಜ, ಅಥವ ೩೦೦ ರೂ ......."

"ಆ ಹುಡುಗ........"

"ಅಂದಹಾಗೆ ಮರೆತಿದ್ದೆ ಹುಡುನನ್ನ ಕರೆಯಿರಿ"

ಹನ್ನೆರಡುವರ್ಷದ ಹುಡುಗನೊಬ್ಬ ಕೋರ್ಟಿದುರು ಹಾಜರಾದ. ತಂದೆಯ ಚಿತ್ರಹಿಂಸೆಗೊಳಗಾಗಿ ನರಳುತ್ತಿದ್ದ ಬಾಲಕನನ್ನು ಎಲ್ಲರೂ ಕನಿಕರ ದೃಷ್ಟಿಯಿಂದ ನೋಡಿದರು.

"ಮಹಾಸ್ವಾಮಿ" ಎಂದು ಹುಡುಗ ಪ್ರಾರಂಭಿಸಿದ. "ಮಹಾಸ್ವಾಮಿ! ತಂದೆಗೆ ತಿಳಿಯದು; ಸ್ವತಂತ್ರ್ಯಯುಗದಲ್ಲಿ ಹೇಗೆ ಬಾಳಬೇಕೆಂಬುದನ್ನೇ ಅವನು ಅರಿಯ. ನಾನೇ ಅವನ ಮೊದಲನೆಯ ಮಗು. ಆದ್ದರಿಂದ, ಮಕ್ಕಳಿಂದ ಶಿಕ್ಷಣಪಡೆದು ಉತ್ತಮನಾಗಲು ಅವನಿಗೆ ಅವಕಾಶ ತೀರಕಡಿಮೆ. ಅವನನ್ನು ತಿದ್ದಲು ನನಗೆ ಇನ್ನೂ ಮೂರು ವರ್ಷಗಳ ಅವಕಾಶ ದಯಪಾಲಿಸಿ" ಎಂದನು.

"ಅದೆಲ್ಲ ಸರಿ ಇರಬಹುದು. ಆದರೂ, ಅವನ ನಡತೆ ಅಕ್ಷಮ್ಯವಾದದ್ದು" ಎಂದರು, ಮ್ಯಾಜಿಸ್ಟ್ರೇಟರು.

"ಆತ ನನ್ನನ್ನು ಓದುಅಂತ ಬಲಪಡಿಸಿದರೂ, ಆ ದುರ್ಯೋಧನೆಯಂತೆ ನಾನು ಆಚರಿಸಲಿಲ್ಲ, ಮಹಾಸ್ವಾಮಿ! ಆತ ಈಚೆಗೆ ಕೆಟ್ಟಸಹವಾಸಕ್ಕೆ ಬಿದ್ದು ಈ ರೀತಿ ನನ್ನ ಮೇಲೆ ಬಂಡವಾಳಶಾಹಿ ವರ್ತನೆ ನಡೆಯಿಸಿದಾನೆಯೇ ಹೊರತು ಬೇರೆ ಅಲ್ಲ" ಎಂದ ಹುಡುಗ

"ನೀನು ಹೇಳುವುದು ಸರಿ ಎಂದು ಒಪ್ಪಿಕೊಂಡರೂ, ಈತನನ್ನು ಶಿಕ್ಷಿಸದೆ ಬಿಟ್ಟರೆ, ಸ್ವತಂತ್ರವಾತಾವರಣವೇ ಕಲುಷಿತವಾಗುತ್ತದೆ! ನಿನ್ನ ಮೂಲಭೂತ ಹಕ್ಕಿಗೆ ಧಕ್ಕೆಬರುತ್ತದೆ. ಆದುದರಿಂದ, ಇಂದಿನಿಂದ ಮೂರುವರ್ಷಕಾಲ ಆತ ನಿನ್ನನ್ನು ಯಾವುದಕ್ಕೂ ಅಜ್ಞೆ ಮಾಡಕೂಡದು, ನಿನಗೆ ಯಾವ ಕೆಲಸವನ್ನೂ ವಹಿಸಕೂಡದು, ಏಕೆ ಏನು ಎಲ್ಲಿಗೆ ಎಂದು ಪ್ರಶ್ನಿಸಕೂಡದು, ಇದನ್ನೇಕೆ ಮಾಡಿದೆ ಇದನ್ನೇಕೆ ಮಾಡಲಿಲ್ಲ ಎಂದು ಕೇಳಕೂಡದು. ಹಾಗೇನಾದರೂ ನಡೆದುದೇ ಆದರೆ, ತಕ್ಷಣ ನೀನು ಈ ಕೋರ್ಟಿಗೆ ದೂರು ಕೊಡತಕ್ಕದ್ದು....ಹೋಗು! ತಂದೆಯನ್ನು ಸುರಕ್ಷಿತವಾಗಿ ಮನೆ ಸೇರಿಸು" ಎಂದು ಅಪ್ಪಣೆ ಇತ್ತು, ಮ್ಯಾಜಿಸ್ಟ್ರೇಟರು ಎದ್ದರು.

—ಪಾಟೀಲ.

---

# ಅಂತ ರ್ದೃಷ್ಟಿ

---

ರಂಗಸಾಮಿ ಮನೆಗೆ ಬಂದವನೇ ಅಂದುಕೊಂಡ—'ಎಲ್ಲಿ ಹೋಗ್ತಾ ಇರಬಹುದು ಈ ನಂಜುಂಡಯ್ಯ? ಚೀಲ ಸಿಕ್ಕಿಸ್ಕೊಂಡು ಸ್ಟೇಷನ್ನೊಳಗೆ ನುಗ್ತಾ ಇದ್ದನಲ್ಲ ...'

'ಮೈಸೂರಿಗೆ' – ತಕ್ಷಣವೇ ಅವನ ಹೆಂಡತಿ ಅಂದಳು.

'ಅರೆ! ನಿನಗೆ ಹ್ಯಾಗೇ ಗೊತ್ತು?....'ಅಂದು ಬಿಟ್ಟ, ಯೋಚನೆ ಮಾಡಿದ—ಇವಳಿಗೆ ಯಾರು ಹೇಳಿರಬಹುದು?—'ಓ! ಸರಿಸರಿ....ನಂಜುಂಡಯ್ಯನ ಹೆಂಡತೀನು ಇವತ್ತು ನಿನ್ನ ಮೀಟಿಂಗಲ್ಲಿ....'

'ಎಂಥ ಮಣ್ಣು ಇಲ್ಲ. ಈಗ ಅರ್ಧಗಂಟೇಲಿ ನೋಡಿದೀನಿ ಅವರ್ಮನೆ ಜಿಮ್ಮೀನ....ಇಲ್ಲೇ ಅಲೀತಿತ್ತು'

'ಚೆನ್ನಾಯ್ತು ಕಣೆ! ...ಓ! ಅದೇ ಹೇಳಿತೇ?'

'ಸುಮ್ಮನಿರೀಂದ್ರೆ... ತಿಳೀದೆ ಏನೇನೋ ಹರಟಬೇಡಿ. ರಾಜಿ ಮಲ್ಲೇಶ್ವರಕ್ಕೆ ಅವಳಕ್ಕನ ಮನೆಗೆ ಹೋಗದೆ ಇದ್ರೆ ಎಂದೂ ಜಿಮ್ಮೀನ ಮುಂಚೆ ಹೊರಕಟ್ಟೊಲ್ಲ'

'ಸರಿ ... ...... ....?'

'ಸರಿ. ಗಂಡ ಊರುಬಿಟ್ಟು ಹೋಗದೆ ಇದ್ರೆ ಎಂದೂ ಅವಳು ಆರುಗಂಟೆಗೆ ಮುಂಚೆಯೇ ಮಲ್ಲೇಶ್ವರಕ್ಕೆ ಹೊರಡುಲ್ಲ. ಈಗ ಗಂಡ ಊರಲ್ಲಿ ಇಲ್ಲದೇ ಇರೋ ಹೊತ್ಗೆ ನಾಯೀನೂ ಐದು ಗಂಟೇಗೇ ಹೊರಕ್ಕೋಕ್ಡಿ, ತಾನೂ ಎದ್ದಿದಾಳೆ ಅಕ್ಕನ ಮನೇಗೆ.... .. ಮನೇಲಿ ಒಬ್ಬಳೇ ಇದ್ದು ಏನು ಮಾಡಬೇಕು? ಹುಡುಗರ್ನೆಲ್ಲ ಅಜ್ಜನ ಮನೇಗಟ್ಟಿದಾಳೆ....ಒಕ್ಕಲಗಿತ್ತಿಗೆ ಖಾಯಿಲೆ ...'

'ಸರಿ . .... .......?'

'ಅದಕ್ಕೇ ನಾ ಅಂದದ್ದು—ಅವಳ ಗಂಡ ಊರುಬಿಟ್ಟು ಹೋಗಿದಾರೆ ಅಂತ .. ಆತ ಹೋದರೂವೆ ನಾಕೇ ಜಾಗ—ತುಮಕೂರು, ಚಿಕ್ಕಬಳ್ಳಾಪುರ, ಚನ್ನಪಟ್ಣ, ಮೈಸೂರು'

'ಸರಿ...............?'

'ಚನ್ನಪಟ್ಟಣಕ್ಕೆ ಹೋದರೆ ರಾತ್ರಿ ಹತ್ಗಂಟೆ ರೈಲೇ ಅವರು ಹಿಡಿಯೋದು. ಅಲ್ಲಿ ಬೇಗ ಹೋಗಿ ಮಾಡುಕ್ಕೆ ಎಂಥ ಕೆಲಸವೂ ಇರುಲ್ಲ. ಚನ್ನಪಟ್ಣಕ್ಕೆ ಹೋಗ್ತಿದ್ರೆ ರಾಜೀ ಕೂಡ ಮನೆಬಿಟ್ಟು ಕದಲುಲ್ಲ..'ತುಮಕೂರಿಗಂತೂ ಅವರು ಹೋಗೇ ಇಲ್ಲ. ಸರಿಸರಿ....ಲಕ್ಷಣವಾಗಿ ಅವರ ಅಣ್ಣಂದ್ಸೇ ಎರಡೂ ಮೂರೂ ಬಸ್ಸು ಇರೂವಾಗ- ರೈಲಲ್ಲಿ ಹೋದಾರೆ?'

'ಸರಿ ...... ....?'

'ನೀವು ಚೀಲ ಇತ್ತು ಅಂದ್ರಿ—ಚಿಕ್ಕಬಳ್ಳಾಪುರಕ್ಕೂ ಹೋಗಿಲ್ಲ. ಖಾಸಾ ದೊಡ್ಡಪ್ಪನ ಮನೆಗೆ ಹೋಗೋರು ಚೀಲ ಯಾಕೆ ತಗೊಂಡು ಹೋದಾರು? ಬೇಕಾಗೋ ಅಷ್ಟು ಬಟ್ಟೆ ಬರೆ ಅಲ್ಲಿ ಯಾವಾಗಲೂ ಇದ್ದೇ ಇರುತ್ತೆ. ಅದಕ್ಕೇ ನಾ ಹೇಳಿದ್ದು—ಅವಳ ಗಂಡ ಮೈಸೂರಿಗೇ ಹೋಗಿದಾರೆ ಅಂತ'

—ಶೇಖರ್

'Just like a woman' ಪತ್ರಿಕೆಯ ಬರಹವೊಂದರ ಆಧಾರ.

ಆ ಸಭೆಯಲ್ಲಿ ನೂರು ಜನ ನಿಂತುಕೊಳ್ಳುವಷ್ಟು ಸ್ಥಳಾವಕಾಶ ಇತ್ತು.

—ಅಂದರೆ ಹಾಕಿದ್ದ ನೂರು ಕುರ್ಚಿಗಳು ಆ ರೀತಿಯವು!

* * *

ಬೇಸಿಕ್ ಪಾಠಶಾಲೆಗಳ ಆರಂಭ—

—ಅಂದರೆ ಈ ಶಾಲೆಗಳಲ್ಲಿ ಪಾಠಗಳೇ ಬೇಸಿಕ್ ಆಗಬಹುದಲ್ಲವೇ?

* * *

ಸೊಪ್ಪುಗಳಲ್ಲಿ ಎಲ್ಲಾ ತರನಾದ ಆಹಾರಾಂಶಗಳೂ ಇವೆ.

ಆಹಾರಶಾಸ್ತ್ರಿ

—ಇದನ್ನು ಹೇಳಬಾರದಾಗಿತ್ತು! ಇನ್ನುಮೇಲೆ ಸೆದೆಗಳನ್ನೇ ಸೊಪ್ಪು ಎಂದು ಮಾರಲು ಶುರುಮಾಡಿ ಬಿಡುತ್ತಾರೆ.

# ಸೀಟಿನ ಬೇಟೆ

---

ಹಾಳು, ಹುಡುಗರು ಪಾಸುಮಾಡಿಬಿಡುತ್ತವೆ, ನಮ್ಮ ಕುತ್ತಿಗೆಗೆ ತರುತ್ತವೆ, ಅವು ಪಾಸಾಗದೆ ಇರುವುದಕ್ಕೆ ವಿಶ್ವವಿದ್ಯಾಲಯದವರೂ ಸಮಾಜವೂ ಸತತ ಪ್ರಯತ್ನ ಮಾಡಿದರೂ, ಹಲವರು ಜಾರಿಕೊಂಡುಬಿಡುತ್ತಾರೆ. ಶಾಲೆ ನಡೆಯುವಾಗ ಅವರು ಓದುತ್ತಾರಲ್ಲಾ ಅಂತ, ಆಟ ನಾಟಕ ಚರ್ಚೆ ಪ್ರವಾಸ ಉತ್ಸವ ಎಂದೆಲ್ಲ ವ್ಯವಸ್ಥೆ ಇದೆ. ರಜಾ ಕಾಲದಲ್ಲಿ ಓದದೆ ಇರಲು ಅವರಿಂದ ಚರಂಡಿ ತೊಳೆಸಿ, ಹಾಳುಗೋಡೆ ಉರುಳಿಸುತ್ತೇವೆ ಆದರೂ.... ಪಾಸು! ಪಾಸಾದ ಕೂಡಲೇ .. ಸೀಟಿನ ಬೇಟೆ

ಅಂತಹ ನಿರ್ಭಾಗ್ಯ ತಂದೆಯರಿಗಾಗಿ ಈ ಲೇಖನ.

೧. ಯಾವ ಕಾಲೇಜಿಗೆ, ಯಾವ ವೃತ್ತಿಗೆ, ಹುಡುಗನನ್ನು ಸೇರಿಸಬೇಕು ಎಂದು ಮೊದಲೇ ಸಂಕಲ್ಪಮಾಡಬೇಡಿ. ಸೀಟು ಸಿಕ್ಕಿದ ಕಾಲೇಜು, ಅಲ್ಲಿ ಹುಡುಗ ಯಾವ ವೃತ್ತಿ ಕಲಿಯುತ್ತಾನೋ, ಅದು ಅಲ್ಲದೆ ಮತ್ತೇನು?

೨. ಹುಡುಗನಿಗೆ ನಂಬರು ಕಡಿಮೆ ಎಂದು ಚಿಂತಿಸಬೇಡಿ. ಅವನು ಶಾಲೆಯ ಇತರೇ ಚಟುವಟಿಕೆಗಳಲ್ಲಿ ಹೆಸರುಗಳಿಸಿದಾನೆಯೇ ಎಂಬುದಕ್ಕೆ ಗಮನ ಕೊಡಿ. ಅದು ಮುಖ್ಯ.

೩. ಸಮಿತಿ ಸದಸ್ಯರ ವಿಷಯದ ಸಾಹಿತ್ಯವನ್ನು ಅಭ್ಯಾಸಮಾಡಿ. ಅಷ್ಟೋತ್ತರ ಸಹಸ್ರನಾಮಾವಳಿ, ಸ್ತೋತ್ರ ರತ್ನಾಕರ ಎಂಬ ಎರಡು ಪುಸ್ತಕಗಳನ್ನು ಕೊಂಡು ಕಂಠಪಾಠಮಾಡಿ.

೪. ನೀವು ಯಾವ ದೇವರಿಗೆ ಒಕ್ಕಲೋ ಆ ದೇವರಿಗೆ ಮುಡಿಪು ಕಟ್ಟಿ; ಆ ದೇವರ ಶತ್ರುದೇವರಿಗೂ ದಯವಿಟ್ಟು ಸುಮ್ಮನಿರುವುದಕ್ಕಾಗಿ ಉಚಿತ ಉಡುಗೊರೆ ವಾಗ್ದಾನಮಾಡಿ.

೫. ಕನ್ನಡಿಮುಂದೆ ನಿಂತು, ದೈನ್ಯತೆ, ಅಸಹಾಯತೆ, ನಿರಾಶೆ, ಭಿಕ್ಷಾಟನ, ಆತ್ಮಾಭಿಮಾನ, ಇವೆಲ್ಲವನ್ನೂ ಒಮ್ಮೆಲೆ ತೋರಿಸುವಂತಹ ಒಂದು ದೇಶಾವರದ ನಗೆಯನ್ನು ಮುಖಕ್ಕೆ ತಂದು, ಅಲ್ಲೇ ಖಾಯಂ ಉಳಿಸಿಕೊಳ್ಳಿ.

೬. ನಿಮ್ಮಂತೆ ಅದೇ ಸಂಸ್ಥೆಗೆ ಸೀಟಿಗಾಗಿ ಪರದಾಡುವವರೆಲ್ಲರ ಪೂರ್ವ ಚರಿತ್ರೆಯನ್ನೂ ನೀವು ಅಭ್ಯಾಸಮಾಡಬೇಕಾಗುತ್ತದೆ. ಸಮಯಬಂದಾಗ, ಅವರ ಹುಡುಗರಿಗೆ ಇಲ್ಲವೆನ್ನಿಸಿ ನಿಮ್ಮವನಿಗೆ ಉಂಟೆನಿಸಲು ಸಹಾಯವಾಗುತ್ತದೆ.

೭. ಇದಕ್ಕಾಗಿ, ಅವರೆಲ್ಲರೂ ಹೋಗಿ ಸಂಬಂಧಪಟ್ಟವರನ್ನು ಕಂಡು ಕೈಮುಗಿದನಂತರ, ನೀವು ಕಾಣಿಸಿಕೊಳ್ಳಬೇಕಾಗುತ್ತದೆ.

೮. ಕಾಗದಪತ್ರ, ಲಿಖಿತ ಶಿಫಾರ್ಸ್, ಇವುಗಳಿಂದ ಏನೂ ಪ್ರಯೋಜನ ವಿಲ್ಲ; ಏಕೆಂದರೆ, ಸಾಮಾನ್ಯವಾಗಿ ನಿಮಗೆ ಪತ್ರ ಕೊಟ್ಟವರು ಇತರೇ ಐವತ್ತು ಜನ ಕ್ಕಾದರೂ ಕೊಟ್ಟಿರುತ್ತಾರೆ.

೯. ಒಂದುವೇಳೆ ಸೀಟ್ ಸಿಗದಿದ್ದರೆ, ಹುಡುಗನ ಮನ ಪೂರ್ಣ ನೊಂದು ಅವನು ದಿಗ್ಭ್ರಾಂತನಾಗುವ ಸಂಭವವಿದೆ. ಆದ್ದರಿಂದ, ಸೀಟಿನ ಬೇಟೆಗೆ ಹೊರಡುವ ಮುನ್ನ, ಅನುಕೂಲವಾದ ಕಡೆ ಅವನಿಗೆ ಮದುವೆ ಗೊತ್ತುಮಾಡುವುದು ಸೂಕ್ತ. ಹಾಗೆ ಮಾಡಿದರೆ, ಬೀಗರೂ ನೀವೂ ಒಟ್ಟುಸೇರಿ ಸುತ್ತಾಡಿ ಪ್ರಯತ್ನಿಸಬಹುದು. ಸಿಕ್ಕದಿದ್ದರೆ, ತಪ್ಪು ಸೊಸೆಯದು ಎನ್ನಬಹುದು.

---

## ಶಾಂತಿ ನಿಲಯ

ಡೀಸೆಲ್ಲು ಟ್ರಕ್ಕು ಗ್ಯಾರೇಜು ಪಕ್ಕದಲಿ
ಬೆಡ್‌ಫರ್ಡು ಜೊಚ್ಚಲಿನ ಮರಿ ಮನೆಯಮುಂದೆ
ನಾರ್ಟನ್ನು ಮೋಟಾರು ಬೈಕು ಮನೆಹಿಂದೆ
ಮನೆ ಯಿರುವುದೋ ಮಿಲ್ಲಿ ನೇರಿಯದಲ್ಲಿ
ಅನತಿ ದೂರದ ಲಿಹುದು ರೈಲ್ವೆವರ್ಕ್ ಷಾಪ್
ಸಂತಾನ? ಇವೆ ನಾಲ್ಕು ಹೆಣ್ಣು ಮಕ್ಕಳು
ಮೂರು ಕಲಿಯುವವು ಹಾರ್ಮೋನಿಯಂ
ಕಾವಲಿಗೆ ಎರಡು ಬುಲ್‌ಡಾಗು ಗಸ್ತಾಗಿಹವು
ಯಜಮಾನ ಕಮ್ಯುನಿಸ್ಟು
ಮಗನೂ R. S. S.
ಹೆಂಡತಿಯೊ ಮಹಿಳಾಸಮಾಜವಧ್ಯಕ್ಷಿಣಿ
ಅತ್ತೆ ಮಾವಂದಿರಿಗೆ ಅರವತ್ತರರೆ ಮರುಳು
ಮನೆಯ ಪೆಸರೋ? 'ಶಾಂತಿನಿಲಯ'

—:ಅ. ರಾ. ಸೇ.

# ಸಿಗರೇಟ್ ಚಟ

ಯಾವನೊ ಒಬ್ಬ ಯಾಂಕೀ ವೈದ್ಯನು
ಅಗ್ಗದ ಬೆಲೆಯಲಿ ಔಷಧ ಪೊಂದನು
ಮಾರುವನಂತೆ! ಮೂರೇ ದಿನದಲಿ
ಮತ್ತದ, ಸತ್ತರು, ಬಯಸದ ತೆರದಲಿ
ಸಿಗರೆಟ್ ಚಟವನು ಮುರಿಯುವನಂತೆ!

ಅಂತಹ ಔಷಧ ಧೀರರಿಗಲ್ಲ!
ಹೇಡಿಗಳಾಡುಗಳದನ್ನು ಕುಡಿಯಲಿ
ನನ್ನಂಥವನಿಗೆ, ನಿಮ್ಮಂಥವರಿಗೆ
ಒಳಗಿನೊಳಗಡೆಯ ಶಕ್ತಿಯೆ ಸಾಕು.

ನಾನೇ ಸ್ವತಃ ಭುಜಬಲದಿಂದ
ಬಾಯಿಂ ಕಡ್ಡಿಯ ನೆಳೆದು ಬಿಸಾಕಿ,
ಎಡಗಾಲಿಂದಲೆ ಬೆಂಕಿಯ ನಾರಿಸಿ
ಶೂರನು, ಎನಿಸಿದೆ! ಕೇಳಿರಿ, ಗೆಳೆಯರೆ!

ಧೂಮದ ಪರಿಮಳ ಥೂ ಥೂ ಎನಿಸಿತು;
ತಂಬಾಕೆಂದರೆ, ತುಂಬಾ ವಾಂತಿ!
ಬೀಡಿ, ಸಿಗರೇಟ್ಟಾವುದ ಕಂಡರು
ಮೈಲಿಗೆ ಯಾಗದು, ಎನ್ನಯ ತುಟಿ ಮಡಿ.

ಆದರೆ, ಆಸುರೀ ಕೃಮಿ,....ಆ 'ಹೆಮ್ಮೆ'
ಹೊಕ್ಕಿತು, ಹೃದಯುವ ಏನೆಂಬೆ?
ಸಿಗರೇಟ್ ಸೇದುವ ಕುರಿಗಳ ಕಂಡರೆ,
'ನಾನೇ ಉತ್ತಮ,' ಎಂಬುವ ಜಂಬ!
ಕಾಲ್ ನೆಲ ಕಂಟದು, ತೋಳೋ ನಾಲ್ಕು!
ತಲೆಯದು ಏರಿತು ಗಗ ಗಗ ಗಗನ!

ಬಡಿಯಲು ಜಂಬವ ಹಚ್ಚಿದೆನೊಂದ,
ಇಳಿಯಿತು ಹೆಮ್ಮೆ! ಮಾನವ ನಾದೆ!
ಆತ್ಮವ ಕೆಡಿಸುವ ಜಂಬಕ್ಕಿಂತ
ಎಂಥದೊ ಎಷ್ಟೊ ಬೀಡಿಯೆ ಮೇಲು!
ಒಬ್ಬನೆ ಸಗ್ಗದ ಲಿರುವುದ ಕಿಂತ
ಎಲ್ಲರು ಸೇರುವ ನರಕವೆ ಲೇಸು!

—: ಪಾಟೀಲ

# ಭಗವಂತಾ !

---

"ನಾಲ್ಕು ಹೆಜ್ಜೆ ನೆಟ್ಟಗೆ ಇನ್ನೂ ನಡೆಯುವುದಕ್ಕೆ ಕಲಿತಿಲ್ಲ.... ಹಳ್ಳ ದಿಣ್ಣೆ ನಾವೇ ಎತ್ತಿ ದಾಟಿಸಬೇಕಾಗಿದೆ.... ಈಗಲೇ ಕೈಗಡಿಯಾರವಂತೆ, ಥತ್!" ಎಂದು ಗದರಿದೆ. ಆದರೂ, ಅವನ ಗಂಟಲಿಗೆ ನನ್ನ ಕಿವಿ ತೂತುಬಿತ್ತು.

ಮುಂದೆ ಇವನು ರಾಜಕೀಯಕ್ಕಿಳಿದು ಭಾರಿ ಬಹಿರಂಗ ಸಭೆಯನ್ನುದ್ದೇಶಿಸಿ ಭಾಷಣಮಾಡುವಾಗ, ಮೈಕ್ ಕೆಟ್ಟರೂ, ಜನ ಏನೂ ಉಳಿಯುವ ಹಾಗಿಲ್ಲ, ಎಂದುಕೊಂಡೆ.

ಆಗ ನನ್ನಾಕೆ ಬಂದು, ಕಿವಿಯಲ್ಲಿ, "ಒಂದಾಣೆಗೇಕೆ ಮೀನ ಮೇಷ? ತೆಗೆದು ಕೊಡಿ, ಪಾಪ" ಎಂದು ಸಲಹೆ ಇತ್ತಳು.

ಒಂದಾಣೆಬೆಲೆಗೆ, ನನ್ನಂಥ ಪಿತೃಗಳನ್ನು ಮಕ್ಕಳ ಹಟಮಾರಿತನದಿಂದ ಪಾರು ಮಾಡಲು, ಮಹಾನುಭಾವರು ಯಾರೋ ಕೈಗಡಿಯಾರಗಳನ್ನು ತಯಾರಿಸಿ ಮಾರು ತ್ತಿದಾರೆಂಬುದು ನನಗೆ ತಿಳಿಯದು. ಬಾಡಿಗೆ ಸೈಕಲ್ ಪಡೆದು ಮೂರು ಮೈಲಿ ತುಳಿದು, ಆ ಅಪ್ರಯೋಜಕ ವಸ್ತುವನ್ನು ತಂದು, ಕೂಸಿನ ಎಡಗೈಗೆ ಬಿಗಿದೆ. ಆನಂದದ ಎವರೆಸ್ಟನ್ನೇ ಹತ್ತಿ ಕುಣಿದ, ಆ ನನ್ನ ತೇನ್‌ಸಿಂಗ!

ಆದರೆ, ಅರ್ಧಗಂಟೆಯೊಳಗೆ, ತಿರುಗಿ ಪ್ರಾರಂಭ–ರಂಪ! ಅವನ ಅಣ್ಣಂದಿರೂ ಅಕ್ಕಂದಿರೂ ಅವನನ್ನ "ಲೋ, ಟೈಂ ಎಷ್ಟು?" "ಕಿವಿಗಿಟ್ಟುಕೊಂಡು ನೋಡು, ನಡೀತಾ ಇಲ್ಲವಲ್ಲೋ" ನದ್ದೇ ಇಲ್ಲ; ಸತ್ತೇಹೋಗಿದೆ" "ಅಣ್ಣನ ಕೈಲಿರುವುದು ಟಿಕ್ ಟಿಕ್ ಟಿಕ್ ಅನ್ನುತ್ತದೆ" "ಮುಳ್ಳು ಸುತ್ತುತ್ತಾ ಇಲ್ಲ" ಎಂದೆಲ್ಲ ಟೀಕಿಸಿ, ಕೂಸಿನ ಕಣ್ಣಲ್ಲಿ ನೀರು ತರಿಸಿದ್ದರು. "ಮೋಸಹೋದೆಯಲ್ಲೋ, ಮಂಕೆ!" ಎಂದು ಅವನ ಸುತ್ತ ಕುಳಿತು ಕೈ ಚಪ್ಪಾಳೆತಟ್ಟಿದರು. ಒಂದಾಣೆ ಗಡಿಯಾರವನ್ನು ಹರಿದು ಚೂರು ಚೂರುಮಾಡಿ, ಮತ್ತೆ ಅವನು ಅಮ್ಮನ ಸೆರಗು ಹಿಡಿದ.

ಸದ್ದುಮಾಡುವ, ಕೀ ಕೊಡಬಹುದಾದ, ಮುಳ್ಳು ಪ್ರದಕ್ಷಿಣೆಮಾಡುವ, ಭಾರ ವಾದ, ತೊಳಗುವ ರಿಸ್ಟ್‌ವಾಚೇ ಬೇಕು, ಎಂದು ಹಟಹಿಡಿದ. ಮನೆ ಎರಡು ಹೋಳಾಯಿತು.

ಸದ್ಯಕ್ಕೆ ಈ ಬೇಡಿಕೆಯನ್ನು ಪೂರೈಸಲು ಆರ್ಥಿಕಸ್ಥಿತಿ ಅನುಮತಿ ಕೊಡು ವಂತಿಲ್ಲ; ಪರಿಸ್ಥಿತಿ ಉತ್ತಮಗೊಳ್ಳುವವರೆವಿಗೂ ಶಾಂತರೀತಿಯಿಂದ ವರ್ತಿಸಿ, ಬಿಕ್ಕಟ್ಟುಂಟುಮಾಡಬಾರದಾಗಿ ಸವಿನಯ ಪ್ರಾರ್ಥಿಸಿದೆ. ನನ್ನ ಶ್ರಮ ವಿಫಲ ವಾಯಿತು. ಕೂಸು ಹಲವಾರು ಸ್ಲೋಗನ್ನುಗಳನ್ನು ಕೂಗುತ್ತ ರೂಮಿಂದ ರೂಮಿಗೆ ಮೆರವಣಿಗೆ ಹೊರಟಿತು. ಎಲ್ಲರ ಹತ್ತಿರಕ್ಕೂ ನಿಯೋಗ ಹೋಯಿತು ಮುಷ್ಕರ ಹೂಡಿತು. ನನ್ನ ಮೇಜಿನ ಕೆಳಗೆ ಕುಳಿತು, ಸತ್ಯಾಗ್ರಹ ಹೂಡಿತು. ಕಡೆಗೆ ಕೋಪ ಕೆರಳಿ, ನನ್ನ ಕನ್ನಡಕವನ್ನೆತ್ತಿ ಹಾಕಿ ಚೂರು ಚೂರು ಮಾಡಿತು

ಸಾಮ ದಾನ ಭೇಧ, ಎಲ್ಲವೂ ದಂಡವಾಯಿತು. ಕೊನೆಗೆ, ಅವನನ್ನು ಎತ್ತಿ ಕುಕ್ಕಿ ಕತ್ತಲಿಕೋಣೆಯಲ್ಲಿ ಕೂರಿಸಿ, ನಾಲ್ಕು ಬಾರಿಸಲೇ ಬೇಕಾಯಿತು.

ಈ ನನ್ನ ಸಮಸ್ಯೆ, ಕೇವಲ ನನ್ನದೇ ಅಲ್ಲ. ದುಡಿದು ತಂದುಹಾಕುವ ಮನುಷ್ಯ ಎದುರಿಸಬೇಕಾದ ಮಹಾ ಸಮಸ್ಯೆ ಇದು, ಎಲ್ಲ ಮನೆಯಲ್ಲೂ.

ನಾವು ಚಪ್ಪಲಿ ತಗುಲಿಸಿಕೊಂಡರೆ, ಹುಟ್ಟಿರುವ ಮಕ್ಕಳಿಗೆಲ್ಲ ಸಾಲಾಗಿ ಅವವು ಗಳ ಕಾಲಯಾನಕ್ಕೆ ತಕ್ಕಂತೆ ಚಪ್ಪಲಿಯಾಗಲೇಬೇಕು ಷೂ ಅಂತ ನಾವು ಆಸೆ ಪಟ್ಟರೆ, ಬಂತು ಗ್ರಹಚಾರ; ಅವಕ್ಕೂ ಷೂ. ಟೈ ಎಂದರೆ ಟೈ, ಟೋಪಿ ಎಂದರೆ ಟೋಪಿ. ನಾವು ಹ್ಯಾಟ್ ಹೊತ್ತರೆ, ತಲೆ ಇರಲಿ ಇಲ್ಲದಿರಲಿ, ಅವಕ್ಕೂ ಬೇಕು, ಹ್ಯಾಟ್. ನಾವು ಮೀಸೆ ಬೆಳೆಸಿದರೆ, ಅವೂ ಅಳುತ್ತ ನಿಂತಿರುತ್ತವೆ. ಇದೆಂತಹ ಸಮತಾವಾದ? ಜುಬ್ಬ, ಫ್ರಾಕ್, ಚಡ್ಡಿ, ಷರಾಯಿ ಅಂತ ಬೇರೆ ಬೇರೆ ಹಂತಗಳಿ ಲ್ಲವೆ, ಜಗತ್ತಿನಲ್ಲಿ .. ಎಳೆಗರುವೇ ಎತ್ತಾಗಬೇಕೆ?

ತಂದೆ ಕಾಫಿ ಕುಡಿದರಾಯಿತು, ಅವು ಹಾಲು ಕುಡಿಯುವುದಿಲ್ಲ. ಅವನು ಎರಡು ಚಮಚ ತುಪ್ಪ ಬಡಿಸಿಕೊಂಡರೆ, ಅವಕ್ಕೂ ಅದೇ ಚಮಚದಿಂದ ಅಷ್ಟೆ ಎಣಿಕೆಯ ಅದೇ ದ್ರಾವಕವನ್ನು ಹುಯ್ಯಬೇಕು ಹನಿಗೆ ಹನಿಯಾಗಿರುವಾಗಲೇ ಹಳ್ಳವಾಗುವ ಆಸೆ ತಂದೆ ಗೊರಕೆ ಹೊಡೆದರೆ, ಅವೂ ಎಚ್ಚರದಲ್ಲೇ ಮಲಗಿ ಕಣ್ಣು ಮುಚ್ಚಿ ಮೂಗು ಡೊಂಕಿಸಿ, ಗರಗಸದ ಸದ್ದುಮಾಡಿ, ತಾವೂ ಹಿರಿಯರು ದೊಡ್ಡವರು ಮುದುಕರು ಎಂದು ನಟಿಸಿ ಆನಂದಿಸುತ್ತವೆ. ಅವನು ಸಿಗರೇಟ್ ಹಚ್ಚಿ ದರೆ, ಅವೂ ಪ್ರಾರಂಭ; ಸ್ನೋ ಅಂದರೆ, ಅವೂ ಸ್ನೋ ಬೇಡುತ್ತವೆ. ಓ ಎಂದರೆ, ಕೋ ಸಾಲದು; ಓಸೇ ಆಗಬೇಕು ವಿಚಿತ್ರಪ್ರಾಣಿ, ಮನುಷ್ಯ.

"ನಾನೇನು ಕಮ್ಮಿ, ನೀನೇನು ಹೆಚ್ಚು! ನಿನಗೆ ಮೈ ಬೆಳೆದಿರಬಹುದು, ಹೊಟ್ಟೆ ದೊಗರು ಬಿದ್ದಿರಬಹುದು, ಕೂದಲು ಉದುರಿರಬಹುದು, ಹಲ್ಲು ಕಳಚಿರ ಬಹುದು! ನಾನು ಪುಟಾಣಿ, ಕೂಸು, ಮಗು, ಚಿಕ್ಕವನು, ನಿಜ! ಆದರೂ, ನಾನೊಬ್ಬ

ಆತ್ಮ; ನಿನ್ನಷ್ಟೇ ಬೆಲೆಯುಳ್ಳ ಆತ್ಮ, ಇದು ಪ್ರಜಾಪ್ರಭುತ್ವ ಯುಗ! ಸಮಾನ ಹಕ್ಕು.... ನೀನು ಅಶ್ಲೀಲ ಅಸಹ್ಯ ಕಾದಂಬರಿ ಓದುವಾಗ, ಅದನ್ನೇಕೆ ಮುಚ್ಚಿರಿಸಿಕೊಂಡು ಓದುತ್ತೀಯಾ.... ನನಗೂ ಹೇಳು ಆ ಹೊಲಸನ್ನು!" ಎಂದು ಮಕ್ಕಳು ನಮ್ಮನ್ನು ಕಾಡಿಸುತ್ತವೆ.

ಪಕ್ಷಪಾತವನ್ನೇ ಸಹಿಸದು, ಶಿಶುಬುದ್ಧಿ. ಎಲ್ಲರಿಗೂ ಎಲ್ಲವೂ, ಎಂಬ ವಾಮ ಪಕ್ಷದ ಸದಸ್ಯರು, ಮಕ್ಕಳು. ತಂದೆಗೆ ಕುರ್ಚಿ ಮೇಜುಗಳಿದ್ದರೆ, ಅವಕ್ಕೂ ಬೇಕು ಅಂತಹ ಉಪಕರಣಗಳು. ಪೆನ್ನು, ಪೆನ್ಸಿಲ್, ಕನ್ನಡಕ, ಬ್ಲೇಡು, ಬೆಲ್ಟು, ಪಿನ್ನು, ಬ್ಯಾಗು ... ಛೆ! ಛೆ!.... ಖರ್ಚಿನ ಮಾತು ಹಾಗಿರಲಿ, ಆಸೆಗೆ ಅಂತ್ಯವೇ ಬೇಡವೇ? ಅವಾಂತರಕ್ಕೆ ಕೊನೆಯೇ ಇಲ್ಲವೇ?

ನಾವು ಬೆಳೆದು ದೊಡ್ಡವರಾದ ಮಾತ್ರಕ್ಕೆ ಈ ಮಕ್ಕಳ ಅಂತ್ಯವಿಲ್ಲದ ಆಸೆಗಳನ್ನು ಪೂರೈಸುವ ಗುಲಾಮರಾಗಬೇಕೆ? ಬೆಳೆದದ್ದು ನಮ್ಮ ತಪ್ಪೆ? ತಾವು ಸಂಪಾದಿಸಿ ಹಣ ಪಡೆದು ವೆಚ್ಚಮಾಡಲು ಶಕ್ತರಾಗುವತನಕ ಇತರರಿಗೆ ಹಿಂಸೆ ಕೊಡಬಾರದೆಂಬ ಬುದ್ಧಿ ಮಕ್ಕಳಿಗೇಕಿಲ್ಲ, ಭಗವಂತಾ.

—ರೇವಣ್ಣ.




ಹಾಗಾದರೆ ವಕೀಲರೆ!
ಹೈಕೋರ್ಟಿನಲ್ಲಿ ಒಂದು 'ರಿಟ್' ಹಾಕಿಬಿಡಿ ಸದ್ಯಕ್ಕೆ—
ಅದು ವ್ಯವಸ್ಥೆಯಾಗೋಹೊತ್ತಿಗೆ ಇಲ್ಲಿ ಭದ್ರಮಾಡಿಬಿಡೋಣ.

# ಪ್ಲೇಬ್ಯಾಕ್ ತತ್ವ

ಸಿನಿಮಾದಿಂದ, ಜೀವನದ ನಾನಾ ಕ್ಷೇತ್ರಗಳಲ್ಲಿ, ಅತ್ಯಂತ ಗಣನೀಯವಾದ ಪ್ರಭಾವವಾಗುತ್ತಿದೆ. ವೇದಾಂತಿಗಳು, "ನಮ್ಮ ಆತ್ಮನು ಸಿನಿಮ ಸ್ಕ್ರೀನಂತೆ ನಿತ್ಯಶುದ್ಧನಾಗಿರುತ್ತಾನೆ; ಹುಟ್ಟು ಸಾವು ಸುಖ ದುಃಖಗಳೆಂಬ ದ್ವಂದ್ವಗಳಲ್ಲಿ ಚಿತ್ರ ದಂತೆ ಹಾದುಹೋದರೂ, ಆತ್ಮನಿಗೆ ಅವು ಅಂಟುವುದಿಲ್ಲ" ಎಂದು ಉದಾಹರಣೆ ಕೊಡುವರು. ತರುಣ ತರುಣಿಯರು ಸಿನಿಮವನ್ನೇ ತಮ್ಮ ಶಾಲಾ ಕಾಲೇಜುಗಳಾಗಿ ಪರಿವರ್ತಿಸಿಕೊಂಡಿದ್ದಾರೆ. ಮಹಿಳೆಯರಿಗೆ ಸಿನಿಮ ಮಂದಿರವೇ ಗುಡಿ ಗೋಪುರ, ಕಾಡುಹರಟೆಯ ಕ್ಲಬ್ಬು. ದೇವತೆಗಳಿಗೆ ಸಿನಿಮವೇ ಭೂಲೋಕ ಸಂದರ್ಶನಕ್ಕೆ ಹಾದಿ. ಮಕ್ಕಳಿಗದೇ ಸರ್ಕಸ್ ಗುಡಾರ; ಕಡಲೇಕಾಯಿ ಗಡಂಗು. ಶ್ರೀಮಂತ ರಿಗೆ ಅದೇ ಆಕರ್ಷಣೀಯ ಗವಿ. ಬಡವರಿಗೆ ಅದೇ ಅಗ್ಗದ ಬಯಲಾಟ. ವರ್ತಕ ರಿಗೆ ಅದು ಗಿರಾಕಿಗಳ ಗೂಡು.

ನಾಟಕದ ಕಂಪೆನಿಗಳು ಸಿನಿಮಾಶಾಸ್ತ್ರದ ಉಪಾಯವನ್ನನುಸರಿಸಿ, ಜನರನ್ನು ರಂಜಿಸುತ್ತಿವೆ ಯುವಕ ಯುವತಿಯರು ತಾರಾಗಣಗಳನ್ನನುಸರಿಸಿ, ಉಡಿಗೆ ತೊಡಿಗೆಗಳನ್ನನುಕರಿಸಿ ಮದುವೆಯಾಗುವ ಕನಸುಕಾಣುತ್ತಿದ್ದಾರೆ.

ಆದರೆ, ಸಿನಿಮಾದವರು ಈಚೆಗೆ ಕಂಡುಹಿಡಿದಿರುವ ಪ್ಲೇಬ್ಯಾಕ್ ತತ್ವವನ್ನು ಆದಷ್ಟು ಹೆಚ್ಚು ಕ್ಷೇತ್ರಗಳಿಗೆ ಇನ್ನೂ ಅಳವಡಿಸದಿರುವುದು ಶೋಚನೀಯ. ರೂಪು ಚೆನ್ನಾಗಿದ್ದು, ಕಂಠಮಾತ್ರ ನವಿಲಿನ ಹಾಗಿರುವ ತಾರೆಯರು, ರೂಪು ಹೊಲಸಾಗಿದ್ದು ಕಂಠ ಹಲಸಾಗಿ ಕೋಗಿಲೆಯ ಹಾಗಿರುವ ನಾರಿಯರು – ಇವರಿಬ್ಬರನ್ನೂ ಹಿಂದು ಮುಂದು ಕೂರಿಸಿ, ಅವರ ತುಟಿಗೆ ಇವರ ಗಂಟಲನ್ನು ಸೇರಿಸಿ, ಕಣ್ಣಿಗೊಬ್ಬರ ಶರೀರ, ಕಿವಿಗಿನ್ನೊಬ್ಬರ ಶಾರೀರ–ಈಯುವುದೇ ಪ್ಲೇಬ್ಯಾಕ್ ತತ್ವ. ಇದನ್ನ, ನಾಟಕಕ್ಕೂ ಈಚೆಗೆ ಉಪಯೋಗಿಸುತ್ತಿದ್ದಾರೆ, ಹಲವರು. ದಪ್ಪಗೆ ಬೆಳೆದಿದ್ದರೂ, ಕೀಚಲು ದನಿ ಇರುವವನು ಯಮನ ಪಾರ್ಟಿಗೆ ನಾಲಾಯಕ್ಕು. ಅವನಿಗೆ ಯಮನ ವೇಷ ಹಾಕಿ, ಪರದೆಯಮುಂದೆ ನಿಲ್ಲಿಸಿ, ತೆರೆಯ ಹಿಂದಿನ ಮೈಕ್‌ಮುಂದೆ ಒರಟು ಯಮ ಧ್ವನಿಯಿರುವ ಮತ್ತೊಬ್ಬನಿಂದ, "ಪಾಪಾತ್ಮಗಳಿರಾ! ಬನ್ನಿ! ಕುಂಭೀಪಾಕ ಇಳಿ ಸುತ್ತೀನಿ" ಎಂದು ಕೂಗಿಸುವುದು ಈಗ ವಾಡಿಕೆಯಾಗಿದೆ.

ಸಾಮಾನ್ಯವಾಗಿ, ಸಂಗೀತ ಕಚೇರಿಗಳಲ್ಲೂ ಈ ರೀತಿ ಮಾಡಬಹುದು ಕೆಲವು ಸಂಗೀತಕಾರರು ರೇಡಿಯೋವಿಗೇ ಸರಿ. ಅವರ ಮೈ ಅಷ್ಟು ವಿಕಾರ; ಮೂತಿ ಅಷ್ಟು ವಕ್ರ. ವಿದ್ವತ್ ಇರಬಹುದು. ಆದರೆ, ರೂಪು ಮಾತ್ರ ತದ್ವತ್ ಮಹಿಷ; ಸ್ವರ ಹಾಕುವಾಗ ವಾಂತಿಮಾಡುವ ಹಾಗಿರುತ್ತದೆ ಬಾಯಿ ... ಅಂಥವರನ್ನ ಸಭೆಯ ಮುಂದೆ ಏಕೆ ಕೂರಿಸಿ ಮಕ್ಕಳು ಮರಿಯನ್ನ ಗದರಿಸಬೇಕು. ತೆರೆಯ ಹಿಂದೆ ಹೋಗಲಿ; ಪಿನ್ ಪಾಟುದಾರ ನಯನಮನೋಹರನಾಗಿದ್ದರೆ, ಅವನನ್ನ ಮೈನ್ ಪಾಟ್ ಮಾಡಬಾರದೇನು? ನಮ್ಮ ಗಾಯನ ಸಮಾಜದವರು ಮನಸ್ಸುಮಾಡಿದರೆ, ಅವಲಕ್ಷಣದ ಹಿರೇ ವಿದ್ವಾಂಸನನ್ನು ಹಿಂದಕ್ಕೆ ತಳ್ಳಿ ಲಕ್ಷಣವಾದ ಕಿರೇ ಶಿಷ್ಯನನ್ನು ಮುಂದಕ್ಕೆ ತರಬಹುದು.

ಹಾಗೆಯೇ, ಭಾಷಣಕಾರರಲ್ಲೂ ಭೀಕರ ಭೀಷಣರೂಪಗಳುಂಟು. ತೆರೆಯ ಹಿಂದಿನಿಂದ ಅವರು ಉಪನ್ಯಾಸಮಾಡಲಿ; ಮುಂದೆ ಒಬ್ಬ ಬಾಯಾಡಿಸಿ ಕೈಯಾಡಿಸಿ ಜನರ ಮನಸ್ಸನ್ನು ಸೂರೆಗೊಳ್ಳಲಿ. ಚುನಾವಣಾ ಪ್ರಚಾರ ಭಾಷಣಗಳಿಗೆ ಈ ತಂತ್ರ ತುಂಬ ಅನುಕೂಲ. ಉಮೇದುವಾರನನ್ನು ಜನರೆದುರು ನಿಲ್ಲಿಸುವುದರಿಂದಲೇ ಅವನಿಗೆ ಸೋಲಾಗುವುದು. ಆತನ ಕಹಿ ಎಣ್ಣೆ ಮುಖವನ್ನು ಪ್ಲೇಬ್ಯಾಕ್ ತತ್ವದ ನುಸಾರ ಹಿಂಬದಿಯಲ್ಲಿರಿಸಿ, ಬೇರೊಬ್ಬ ಪಶುವನ್ನು ಮುಂದೂಡೋಣ. ಭಾಷಣ ಮಾತ್ರ ಉಮೇದುವಾರನದೇ ಇರಲಿ.

ಹಲವು ನಾಯಕರಿಗೆ ಭಾಷಣ ಬರೆದುಕೊಡುವವರು, ಬೇರೊಬ್ಬರು ಅದನ್ನ ಕೈಯಲ್ಲಿ ಹಿಡಿದುಕೊಂಡು ಓದಲಾರದೆ ತತ್ತರಿಸುತ್ತಾರೆ, ನಾಯಕರು. ಏಕೆ? ಪ್ಲೇಬ್ಯಾಕ್ ತತ್ವವಿದೆಯಲ್ಲಾ!.... ಬರೆದ ಮಹರಾಯನೇ ತೆರೆಯ ಹಿಂದಿನ ಮೈಕಿನ ಮೂಲಕ ಸರಿಯಾಗಿ ಓದಲಿ.... ನಾಯಕ ಅದಕ್ಕನುಗುಣವಾಗಿ ತುಟಿಯಾಡಿಸಲಿ, ಸಾಕು.

—ಪಾಟಾಳಿ.

——o——

ಒಂದೊಂದು ಗಂಡು ಆಮೆಗೂ ಆರಾರು ಹೆಂಡರಂತೆ.

—ಅದಕ್ಕೆ ಅಷ್ಟು ಮೆಲ್ಲಗೆ ಅದು ಮನೆಗೆ ಹಿಂದಿರುಗುತ್ತೆ.

* * *

ರಾಷ್ಟ್ರೀಯ ರೈಲ್ವೆಗಳಲ್ಲಿ ದೂರ ಪ್ರಯಾಣಿಕನಿಗೆ ಅಗ್ರಪೂಜೆ.

—ಅದಕ್ಕೆ ಇಂಜಿನ ಹಿಂದೇನೇ ಅವರ ಗಾಡಿ ಕಟ್ಟೋದು.

# ಅವನ ಲಗ್ನ ಎಂದು?

ಈ ವರ್ಷದ ಲಗ್ನಗಳೂ ಮುಗಿಯುತ್ತಾ ಬಂದಿವೆ. ಆದರೂ, ಸೋಮುವಿಗೆ ಇನ್ನೂ ಮದುವೆ ಇಲ್ಲ. ಗಂಡು, ಬಿ.ಎಸ್‌ಸಿ. ತಂದೆಗೆ ಅವನೂ ಸೇರಿ ಮೂರೇ ಮೂರು ಮಕ್ಕಳು, ಮೂರನೆಯದು ಹೆಣ್ಣು, ಮೊದಲನೆಯವನಿಗೆ ೩೦೦ ರೂಪಾಯಿ ಸಂಬಳ, ಮದ್ರಾಸ್‌ಕಡೆ ಮಾವ. ಸೋಮುವಿಗೂ ಸರ್ಕಾರಿ ಕೆಲಸ ಇದೆ, ಸಂಬಳಕ್ಕಿಂತ ಡಬ್ಬಲ್ ಕೂತಕಡೆಯಲ್ಲೇ ಗ್ಯಾರಂಟಿ ವರಮಾನ ಎಡಗೈಮೇಲೆ.... ಆದರೂ. ಲಗ್ನ ಇನ್ನೂ ಇಲ್ಲ. ೧೯೫೧ರ ಸೆನ್‌ಸಸ್ ಲೆಕ್ಕದಲ್ಲೇ 'ಸೋಮು ಮಕ್ಕಳು' ಎಂದು ಎರಡೋ ಮೂರೋ ದಾಖಲಾಗಬೇಕಾಗಿತ್ತು, ಅವನ ಹಣೇಬರಹ ಚೆನ್ನಾಗಿದ್ದಿದ್ದರೆ....

ಗೌರವಸ್ಥ, ಉಪಕಾರಿ, ಪಾದರಸ! ಆದರೂ, ಲಗ್ನ ಇನ್ನೂ ಇಲ್ಲ, ಅಂದರೆ, ನೀವು ಮೂಗಿನಮೇಲೆ ಬೆರಳಾಡಿಸುತ್ತೀರಿ, ಖಂಡಿತ. ಅವನ ಜಾತಿ ಕುಲ ಗೋತ್ರ ಸುತ್ತಳತೆ ಎತ್ತರ ಬಣ್ಣ ಅವನ ಪರ್ಸಿನ ಸೈಜು ಬ್ಯಾಂಕ್ ಪಾಸ್ ಬುಕ್ ನಂಬರು— ಎಲ್ಲವನ್ನೂ ನಿಮಗೆ ತಿಳಿಸುವಂತೆ ನನಗೆ ಪತ್ರ ಬರೆಯುತ್ತೀರಿ, ಖಂಡಿತ.

ಮದುವೆ ಎಂದರೆ ಮನ ಒಪ್ಪದು, ಎಂದಲ್ಲ. ಸೋಮು ಪ್ರಯತ್ನದಿಂದ, ಅವನ ಪಿತೂರಿಯಿಂದ, ಅವನ ನಂಟರಿಷ್ಟರಪೈಕಿ ಸುಮಾರು ೭೩ ಜನ ಗಂಡು-ಹೆಣ್ಣಿಗೆ ಲಗ್ನವಾಗಿದೆ. ಟೆಂಪರವರಿ ನೌಕರಿಯಲ್ಲಿದ್ದ ನರಪೇತಲುಗಳಿಗೂ ಅವನು ತನ್ನ ನವನೀತ ಪ್ರಯೋಗದಿಂದ ಕುತ್ತಿಗೆಗೆ ಕಟ್ಟಿದಾನೆ, ಅಂದಮೇಲೆ, ಖಾಯಂ ಕೆಲಸದಲ್ಲಿರುವ ಅವನೇ ಏಕೆ ಒಂಟಿಯಾಗಿದಾನೆ, ಎಂಬ ಪ್ರಶ್ನೆ ತಾನಾಗಿಯೇ ಏಳುತ್ತೆ.

ಕೆಲವರು ಸೋಮುವನ್ನು, ಭಾರಿ ಮುಮುಕ್ಷು, ಆಂಜನೆಯೋಪಾಸಕ, ಗಣಪ, ಮದುವೆಮಾಡಿಕೊಳ್ಳದಿರುವುದು ಅವನ ತಾತ ಮುತ್ತಾತಂದಿರಿಂದಲೂ ಮನೆತನದಲ್ಲಿ ನಡೆದುಬಂದಿರುವ ವ್ರತ, ಬ್ರಹ್ಮಚಾರಿಯಾಗಿಯೇ ಭಾಗವತೀ ಸಮೇತನಾದ ಭಗವಂತನ ಹತ್ತಿರಕ್ಕೆ ಹೋಗಬೇಕೆಂಬ ಹಂಬಲ- ಎಂದೆಲ್ಲ ಪಿಸುಗುಟ್ಟುತ್ತಾರೆ. ಆದರೆ, ಉಪ್ಪು ಖಾರ ಆಲೂಗಡ್ಡೆ ಈರುಳ್ಳಿ ಬಾದಾಮಿ ಬೂಂದಿಗಳನ್ನು ಯಥೇಚ್ಛವಾಗಿ ಹೊಡೆಯುವ ಸೋಮುವನ್ನು ಸಂನ್ಯಾಸಾಶ್ರಮ ಪ್ರೇಮಿ, ಎಂದು ಹೇಗೆತಾನೆ ಹೇಳುವುದು? ಅವನು ಮಠಾಧಿಪತಿಯಾಗಿದ್ದರೆ. ಆ ಮಾತು ಬೇರೆ.

ತಂಗಿಗೆ ಗಂಡು ಹುಡುಕಿ, ಅವಳಿಗೆ ಮದುವೆಯಾಗುವತನಕ ಹೀಗೆಯೇ ಇರುತ್ತಾನೆ, ಎಂದು ಊಹಿಸಿದವರಿಗೆ ನಮ್ಮ ಜವಾಬು ಇಷ್ಟೇ; ನನ್ನ ಮದುವೆಗೆ ನೀನೇಕೆ ಒಪ್ಪಾಡುತ್ತೀ, ಎಂದು ಆ ಹುಡುಗಿ ಹುಚ್ಚಾಸ್ಪತ್ರೆ ಸೇರಿ, ಆರು ತಿಂಗಳಾ ಯಿತಲ್ಲಾ,.... ಈಗೇಕೆ ಹಾಯವಾಗಿ ಸೋಮು ಲಗ್ನವಾಗಬಾರದು?

ಸೋಮುವಿನ ಈಗಿನ ಪರಿಶೋಚನೀಯ ಸ್ಥಿತಿಗೆ ರಾಜಕುಮಾರಿ ಅಮೃತ ಕೌರೇ ಕಾರಣ; ಸಂತಾನ ನಿರೋಧ ಅಂತ ಆಕೆ ಚಳುವಳಿ ಹೂಡಿದಳು; ಈತ, ಹೀಗೆ ಕೂತ ... ಎನ್ನುತ್ತಾರೆ. ಇದೂ ತಪ್ಪು. ಏಕೆಂದರೆ, ಅವನೇ ಸ್ವತಃ ಓಡಿ ಯಾಡಿ ಅಷ್ಟೊಂದು ಸಂಸಾರಗಳನ್ನು ನಿರ್ಮಿಸಿ ನೆಲೆಗೊಳಿಸಿ ಬೆಳೆಯಿಸಿದಾನೆ.

ಯಾವುದೋ ಗುಪ್ತರೋಗ ಇರಬಹುದು. ಅದನ್ನೇಕೆ ಮುಂದಿನ ತಲೆಮಾರಿಗೆ ಬಿಟ್ಟುಹೋಗೋಣ, ಎಂಬ ನಿರ್ಧಾರವಿರಬಹುದು, ಎನ್ನುತ್ತಾರೆ. ಆದರೆ, ಅವನ ಚಟುವಟಿಕೆ ಅವನು ಅನ್ನ ಕಲಸುವ ಖುಷಿ, ಅವನ ಮಸಾಲೆದೋಸೆ ಮಸಲತ್ತು. ಇದನ್ನು ನೋಡಿದವರಾರೂ, ಅವನ ಆರೋಗ್ಯದ ವಿಷಯದಲ್ಲಿ ಅನುಮಾನಿಸುವುದಿಲ್ಲ,

ಮಾವನ ಮನೆಗೆ, ವಿ. ಪಿ. ಪಾರ್ಸಲ್‌ನಂತೆ, ವರದಕ್ಷಿಣೆ ತೆತ್ತರೇನೇ ಅವನು ಹೋಗೋದು, ಹತ್ತುಸಾವಿರ ಯಾವನು ಕೊಡುತ್ತಾನೆ? ಹೆಣ್ಣನ್ನು ಕೊಡುವುದಲ್ಲದೆ, ಕೊಸರಿಗೆ ಎರಡುವರ್ಷ ಅಮೇರಿಕಾಗೆ ಕಳುಹಿಸಿ ಖುಷಿ ಪಡಿಸಬೇಕು, ಎಂದೆಲ್ಲ ಷರತ್ತು ಹಾಕುತ್ತಿದ್ದಾನೋ, ಏನೋ – ಎಂದು ಹಲವರು ಹೇಳುತ್ತಾರೆ. ಆದರೆ, ಬಲಗೈ ಕೊಡುವುದನ್ನು ಎಡಗೈಗೆ ಗೊತ್ತಾಗದೆ ದಾನಮಾಡುವ ದಾಕ್ಷಿಣ್ಯ ಪೂರ್ಣ ಸೋಮು ದಕ್ಷಿಣೆಗಾಗಿ ಕಾಯುತ್ತಾನೆ ಎಂಬುದು ಸುಳ್ಳಿರಬೇಕು.

ಕಾಲೇಜಲ್ಲೋದುತ್ತಿದ್ದಾಗ, ಯಾವಳನ್ನೋ ಪ್ರೇಮಿಸಿರಬೇಕು; ಆಕೆಗೆ ಅದು ಗೊತ್ತಾಗದೆ, ಆಕೆ ಬೇರೆ ಒಬ್ಬನನ್ನು ಮದುವೆಯಾಗಿರಬೇಕು. ಅದರಿಂದ ಮನನೊಂದು, ಕೊರಗುತ್ತಿರಬೇಕು, ಎನ್ನುವವರೂ ಉಂಟು. ಆದರೆ, ಗಂಡು ಹುಡುಗರ ಕಾಲೇಜಲ್ಲಿ ಓದುತ್ತಿರುವ ಯಾವ ಹುಡುಗಿಯನ್ನು ತಾನೆ ಯಾವ ಸಹಪಾಠಿ ಪ್ರೇಮಿಸಲು ಸಾಧ್ಯ?

ಇಂಥ ಮೂಗು, ಇಂಥ ಹುಬ್ಬು, ಇಂಥ ಬಣ್ಣ, ಇಷ್ಟು ಉದ್ದದ ಕಿವಿ, ಈ ಮಟ್ಟದ ಕುಳ್ಳು, – ಎಂಬಿವೇ ಮುಂತಾದ ಆದರ್ಶ ಸೌಭಾಗ್ಯಗಳುಳ್ಳ ಹೆಣ್ಣಿಗಾಗಿ ಹುಡುಕುತ್ತಿದ್ದಾನೆ, ಇನ್ನೂ — ಎನ್ನುತ್ತಾರೆ. ಅಂಥ ಹೆಂಗಸು ಸಿಗುವತನಕ ಹೀಗೆಯೇ ಅವಿವಾಹಿತನಾಗಿರುತ್ತಾನೆ, ಎನ್ನುತ್ತಾರೆ. ಆದರೊಂದು, ಸೋಮು ಸಿನಿಮಾಗೆ ಹೋಗುವುದೇ ಇಲ್ಲ. ಕನ್ನಡಕಾದಂಬರಿಗಳನ್ನೋದುವುದಿಲ್ಲ. ಅಂದಮೇಲೆ, ಆದರ್ಶ ಮಹಿಳೆಗಾಗಿ ಅವನು ಹುಡುಕುತ್ತಿದ್ದಾನೆ, ಎಂಬುದು ಸುಳ್ಳಿರಬೇಕು.

ಇವೆಲ್ಲ ಬರಿಯ ಊಹೆ. ಅವನ ಜಾತಕದಲ್ಲಿ ವಿವಾಹಯೋಗ ಇಲ್ಲ ಎಂಬುದೂ ಬರಿಯ ನೆಪ. ನನಗೆ ಗೊತ್ತು ಅವನ ಬ್ರಹ್ಮಚರ್ಯದ ಗುಟ್ಟು:—"ಮದುವೆಮಾಡಿಕೊಂಡರೆ, ಸುಖವಾಗಿರಬಹುದೆ? ಎಂಬ ಸಂದೇಹ ನಿವೃತ್ತಿಯಾಗುವತನಕ ಸೋಮು ಮದುವೆಯಾಗುವುದಿಲ್ಲ. ಅದಕ್ಕಾಗಿ ಅವನು ತನ್ನ ನಾಲ್ಕುಜನ ಆಪ್ತಸ್ನೇಹಿತರನ್ನು ಆರಿಸಿ, ಅವರ ದಾಂಪತ್ಯಜೀವನವನ್ನು ಗುಟ್ಟಾಗಿ ಪರಿಶೀಲಿಸುತ್ತಿದಾನೆ. ಕೊನೆಯತನಕ ಪರಿಶೀಲಿಸುತ್ತಾನೆ. ಪರಿಶೀಲಿಸಿ, ಅವರೆಲ್ಲರೂ ಇಹಲೋಕದ ಬಾಳನ್ನು ಮದುವೆಯಿಂದ ಹಸನಾಗಿಸಿದರು, ಎಂದು ನಿಶ್ಚಯವಾದರೆ, .... ಆಗ, ತಾನೂ ಮದುವೆಮಾಡಿಕೊಳ್ಳುತ್ತಾನೆ. ಅಲ್ಲಿಯತನಕ, ಹೀಗೆಯೇ, ಪರೀಕ್ಷಿಸುತ್ತಲೇ ಇರುತ್ತಾನೆ....ಏಕೆಂದರೆ, ಅವನು ವೈಜ್ಞಾನಿಕ ಮನೋಭಾವದವನು."

—ಪಾಂಡುರಂಗ.

---



ಮೆಡಿಕಲ್ ಕಾಲೇಜ್ ಸಮಿತಿಗೆ ಮೆಂಬರು ಆದಾಗಿಂದ, ಜನರ ಕಾಟ ತಪ್ಪಿಸಿಕೊಳ್ಳಲು ಈ ಮನೆಯಲ್ಲಿದೇನಪ್ಪ !

# ನವ್ಯಕವಿ

(ಅಡಿಗರಡಿಯಹಿಡಿದು)

ಎಲ್ಲಕೂ ಕೈಹಾಕಿದವನಿವ; ಕೆಲಸವೆಲ್ಲ ಹಾಳು
ಏಸೊ ಕವನ ಕಟ್ಟಿಸಿದ; ಬರಿಯ ಕಗ್ಗ ಬೋಳು
ಬಾಳ ಗೀತೆಯನ್ನು ಹಾಡಲಪಸ್ವರವ ನೆಮ್ಮಿದ
ಕಾಳಾಯಿತು ಲೋಕವೆಂದು ಬರಿದೆ ಹುಯಿಲ ಚಿಮ್ಮಿದ
ರವಿಯನಿವನು ನೋಡಿ 'ಏನು? ಬರಿಕತ್ತಲೆ' ಎಂದನು
ಬೆಳದಿಂಗಳ ತಾಳನಿವನು ನೆಲಮಾಳಿಗೆ ಗಿಳಿವನು
ಸಿಂಗಾರವ ತಾಳನಿವನು ಭೀಭತ್ಸದಿ ಮುಳುಗುವ
ನಂದನವನದೊಳಗೆ ಹೋಗಿ ಗೆಜ್ಜಲನ್ನು ತಡಕಿದ
ಸಂದಿ ಗೊಂದಿಯೊಳಗೆ ನುಗ್ಗಿ ಸ್ವಚ್ಛಂದದಿ ದುಡುಕಿದ
ಆನೆ ಯೇರಲಿಲ್ಲ ಇವನು ನಾಯ ಬಾಲ ಹಿಡಿದನು
ನಾಗಸ್ವರವ ಕೇಳಲಿಲ್ಲ ಮದ್ದಳೆಯನು ಬಡಿದನು
ದೋಸೆಯನ್ನು ಸವಿಯಲಿಲ್ಲ ಕಾವಲಿಕೈ ಸುಟ್ಟಿತು
ಹಾಸನದಿಯಲೀಸಲಿಲ್ಲ ಗೋಳು ಗುಂಡಿ ಗಿಳಿದನು
ವ್ಯಾಸನನ್ನು ತದುಕಿ ಇವನು ಥಾಮಸನನು ಮೆರೆಸಿದ
ಥಿಯರಿಯಲ್ಲಿ ಆ್ಯವರೇಜು ಪ್ರಾಕ್ಟಿಕಲ್ಲು ಢುಂಕಿ
ಸ್ಲೈಡ್ ರೂಲನು ಅರಿಯ ನಿವನು ಕ್ಲಾರ್ಕ್ ಟೇಬಲ ಮಂಕಿ
ರೋಮ್ಯಾಂಟಿಕ ಸತ್ತನೆಂದು ತನ್ನ ಬೆನ್ನ ಕಟ್ಟಿದ
ಭೂಮಿಯನ್ನೆ ಬಿಟ್ಟನಿವನು ಪಾತಾಳವ ಮುಟ್ಟಿದ

—ಅ. ರಾ. ಸೇ.

---

# ದರಿದ್ರ ನಾರಾಯಣ

ನಾವು ನಾಲ್ಕಾರು ಮಂದಿ ಸ್ನೇಹಿತರು ತಿರುಗಾಡಿಕೊಂಡು ಬರೋಣವೆಂದು ಉತ್ತರ ದೇಶಕ್ಕೆ ಹೋಗಿದ್ದೆವು. ನಮ್ಮ ಸ್ನೇಹಿತ ನಾಣಿ ಕೆಲಸದಲ್ಲಿರುವ ಡಿಲ್ಲಿ ಸಮೀಪದ ಊರಿಗೂ ಹೋಗಿದ್ದೆವು. ಅವನಿಗೆ ಉತ್ತರದ ನಗರಗಳಲ್ಲಿಯೇ ವರ್ಗಾ ವರ್ಗಿ ಆಗುತ್ತಿರುವುದರಿಂದ ನಾವು ಅವನನ್ನು ಕಾಣದೆ ಒಂದೆರಡು ವರ್ಷಗಳು ಸಂದಿದ್ದವು. ಈಗ ಅವನಿಗೆ ಕೈತುಂಬ ಸಂಬಳ, ಸೊಗಸಾದ ಬಂಗಲೆ, ಆಳು ಕಾಳುಗಳಿಗೆ ಕಡಿಮೆಯಿಲ್ಲ—ಅಂತೂ ಸಂತೋಷವಾಗಿ ಸಂಸಾರ ಹೂಡಿದ್ದಾನೆ. ನಮ್ಮನ್ನೆಲ್ಲ ಕಂಡರೆ ಹೃತ್ಪೂರ್ವಕವಾದ ಆದರ. ಏನಾದರೇನು? ಅವನ ಒಂದು ಚಾಳಿ ಮಾತ್ರ ಘಾಲಾಕ್ಷನಿಂದಲೂ ಬಿಡಿಸಲು ಸಾಧ್ಯವಿಲ್ಲದ್ದು, ಅದೇನೆಂದರೆ ಮಾತು ಮಾತಿಗೆ 'ದರಿದ್ರ' ಎನ್ನುವುದು. ಯಾವಾಗಲೂ ಅತೃಪ್ತಿ ಸೂಚಿಸುವುದು.

"ಲ್ರೋ, ಇಲ್ಲಿಗೆ ಬರ್ತೀವೀಂತ ಕಾಗದಾನಾದರೂ ಮೊದಲಾಗಿ ಬರೀಬಾರ ದಿತ್ತೇನ್ರೋ ದರಿದ್ರ"—ಎನ್ನುತ್ತಲೇ ಅವನು ನಮ್ಮನ್ನು ಸ್ವಾಗತಿಸಿದ್ದು.

"ಆದಿರಲಿ ನೀನ್ ಹೇಗಿದಿಯಾ ರಾಜಾ?" ಎಂದರೆ, ಇರೋದೇನ್ರೋ—ಹಾಳು ನೌಕರಿ ದರಿದ್ರದ್ದು; ಈ ಕಡೆಯೆಲ್ಲ ಶುದ್ಧ ದರಿದ್ರ....ಎಂದು ಪ್ರಾರಂಭಿಸಿದ. 'ದರಿದ್ರ ಲೈಫ್ ಕಣ್ರೋ"—ಎಂದ.

ಅಲ್ಲ, ಇವನಿಗೇನು ಬಂದಿದೆ ದರಿದ್ರ ಅನ್ನುವುದಕ್ಕೆ ಸಾಲವಾಗಿದೆಯೇ ಪಠಾ ಣರು ಬಂದು ಎಳೆಯುತ್ತಿದಾರೆಯೆ? ವಾಸಕ್ಕೆ ಮನೆ ತಾಪತ್ರಯವೆ? ಏನು ಕಡಿಮೆ ಯಾದದ್ದು? ಹೀಗೆಲ್ಲ ಭರ್ತ್ಸನೆ ಮಾಡಿದರೆ ಆದೆಲ್ಲಾ ಕಡಿಮೆಯಿಲ್ಲವೆಂಬುದನ್ನು ಒಪ್ಪಿಕೊಂಡ. ಆದರೆ "ಬರುಡೆ ತುಂಬ ಬರೇ ಬೂದಿಯಿರುವ ಪ್ರಾಣಿಗಳೂ ಕೂಡ ನನಗಿಂತ ಮೇಲಂತಸ್ತಿನಲ್ಲಿದಾವಾಲ್ರೊ" ಎನ್ನುತ್ತಾ ಮತ್ತೆ "ದರಿದ್ರ" ಎಂದ.

ಹೌದು! ಕೇವಲ S. S. L. ಪಾಸಾಗಿ ೫೦೦ ನುಂಗುತ್ತಿದಾನೆ! ಸಾವಿರ ಮಂದಿ ನೌಕರರ ಮೇಲೆ ಸವಾರಿಮಾಡುತ್ತಿದಾನೆ! "ನಿನ್ನನ್ನೇನು ಮೇಲಕ್ಕೇರಿ ಸೋದಕ್ಕೆ ಕಡಮೆ ಮಾಡಿದಾನೆಯೆ ದೇವರು?" ಎಂದು ಅವನನ್ನು ಥರಾಟೆಗೆ ತೆಗೆದುಕೊಂಡೆವು. ಆಗ ಮಾತ್ರ ಏನು ಹೇಳಲೂ ತೋಚದೆ "ಆ ವಿಚಾರ ಬಿಡಿ ದರಿದ್ರ, ಊರು ಕಡೆ ಸಮಾಚಾರ ಹೇಳಿ" ಎಂದು ನುಣುಚಿಕೊಂಡ ನಾಣಿ.

ಈ 'ದರಿದ್ರ' ಮಂತ್ರ ಹುಡುಗನಾಗಿರುವಾಗಲೆ, ಅವನನ್ನ ಅಂಟಿಕೊಂಡಿತ್ತು. ಯಾವ, ಮಹರಾಯ ಅದನ್ನು ಅವನ ಕಿವಿಯಲ್ಲಿ ಊದಿದನೋ. ಸ್ಕೂಲಿನಲ್ಲಿರು

ವಾಗಲೂ 'ದರಿದ್ರ' ಪರೀಕ್ಷೆ 'ದರಿದ್ರ' ಪ್ರಶ್ನೆ ಅನ್ನುತ್ತಲಿದ್ದವನು S. S. L. C. ರಿಸಲ್ಟು ಬಂದಾಗಲೂ "ದರಿದ್ರ ಪಾಸಾಗಿಹೋಯಿತು" ಅಂದಿದ್ದ ಈ ಇಲಾಖೆಯಲ್ಲಿ ಪ್ರಾರಂಭದಲ್ಲಿ ಗುಮಾಸ್ತಗಿರಿ ಗಿಟ್ಟಿಸಿಕೊಂಡಾಗಲೂ "ದರಿದ್ರ ಕ್ಲಾರ್ಕ್ ಕೆಲಸ" ಎಂದು ಗೊಣಗಿದ ಹೀಗೆ ಗೊಣಗಾಡುತ್ತಲೇ ಹಲವಾರು ಇಲಾಖಾ ಪರೀಕ್ಷೆಗಳಿಗೆ ಕುಳಿತು ಪಾಸಾಗಿ ಬಲುಬೇಗನೆ ಮೇಲೇರಿ ಸಾವಿರ ರೂಪಾಯಿ ಸಂಬಳ ತಿಂಬುವ ನಾದ. ಈ ನಡುವೆ ಅವನು ಹೇಳಿದ ಹಾಗೆ "ದರಿದ್ರ ಮದುವೆ" ಕೂಡ ಆಗಿ ಮಕ್ಕಳೂ ಆದವು ಮುದ್ದು ಮುದ್ದಾಗಿದಾವೆ ಮರಿಗಳು. ಅವನು ಅಭ್ಯುದಯದ ಒಂದೊಂದು ಮೆಟ್ಟಲನ್ನೇರಿದಾಗಲೂ ಗೆಳೆಯರು ಅಭಿಮಾನದಿಂದ ಅಭಿನಂದಿಸು ತ್ತಿದ್ದೆವು. ಆದರೇನು, ಆತ ಮಾತ್ರ "ಏನು ಮಹಾದರಿದ್ರದ... " ಎಂದು ಬಿಡುತ್ತಿದ್ದ.

"ಅಸಂತೋಷ್ನ ಶ್ರೀಯೋ ಮೂಲ" ಎಂಬುದರ ಗುಟ್ಟು ನಾಣಿಗೆ ಸಿಕ್ಕಿಹೋ ಗಿರಬೇಕು ಇರಲಿ, ಚಿಂತೆಯಿಲ್ಲ. ಅಸಮಾಧಾನವೇ ಎಲ್ಲ ಪ್ರಗತಿಗೂ ಮೂಲ ವಾಗಿರಬಹುದು. ಆದರೆ ದೇವರು "ಸುಖ, ಅಭ್ಯುದಯ ಕೊಟ್ಟಾಗ ದರಿದ್ರ ದರಿದ್ರ" ಅಂತ ಜಪಿಸುತ್ತಾ ಹುಳಿ ಹಿಂಡಿಕೊಳ್ಳುತ್ತಲೇ ಇರಬೇಕೆ? ಸಾಲದಕ್ಕೆ ಈ ನಾಣಿಗೆ ಹುಟ್ಟುವಾಗಲೇ ಮೂತಿಯಲ್ಲಿ ಗೊಣಗಾಟದ ಕಳೆ ಮೂಡಿಬಂದಹಾಗಿದೆ.

ಬಾಯಲ್ಲಿ 'ದರಿದ್ರ' ಮಂತ್ರವಾದರೂ, ಆದರ ವಿಶ್ವಾಸಗಳಿಗೆ ಮೇರೆಯಿಲ್ಲ. ಬೇಕು ಬೇಕಾದ ಹಾಗೆ ಉಪಚರಿಸಿದ ನಾಣಿ. ಆದರೆ ಯಾವುದೇ ವಸ್ತು ಬರಲಿ ಅದರ ಹಿಂದೆ 'ದರಿದ್ರ' ಜಪ ಸಿದ್ಧ. ರಸಗುಲ್ಲ ಬಾಯಿಗಿಡುವಾಗಲೂ ಅದನ್ನು ಕಸ ವೆನ್ನಿಸಿಯೇ ಇಡಬೇಕೆಂಬುದು ಅವನ ಜಾಯಮಾನ, ಇದು ವೈರಾಗ್ಯದ ಒಂದು ವಿಕಟರೂಪವೋ ಏನೊ!

ಒಂದು ದಿನ ತಾಜಮಹಲ್ ನೋಡುವುದಕ್ಕೆಂದು ಆಗ್ರಕ್ಕೆ ಕರೆದುಕೊಂಡು ಹೋಗಿದ್ದ ನಮ್ಮನ್ನೆಲ್ಲ. ಆ ಭವ್ಯತೆಗೆ ಬೆರಗಾಗಿ ನಿಂತು ನೋಡುತ್ತಿದ್ದೆವು. "ಏನು ದರಿದ್ರ ತಾಜಮಹಲೋ! ಯಾಕೆ ಈ ಜನಗಳು ಹೀಗೆ ಬಾಯಿಬಿಡುತ್ತಾರೋಪ್ಪ"— ಅಂತ ಹಿಂದಿನಿಂದ ಯಾರೋ ಅಂದರು. ಆಗ ಭಾವುಕರೊಬ್ಬರು ನಾಣಿಯನ್ನು ಕಂಡು ಹೇಳಿದರು "ಮಗೂ ನಿನ್ನ ತಿದ್ದುವುದಕ್ಕೆ ಆ ದರಿದ್ರ ಬ್ರಹ್ಮನಿಂದಲೂ ಸಾಧ್ಯ ವಿಲ್ಲ; ಅಂಥ ದರಿದ್ರ ನಾರಾಯಣ ನೀನು!"

ನಾವು ಚಿಕ್ಕಂದಿನಲ್ಲಿ ಅಪ್ಪಿತಪ್ಪಿ ದರಿದ್ರ ಗಿರಿದ್ರ ಅಂತ ಏನಾದರೂ ಮಾತೆತ್ತಿ ದ್ದಕ್ಕೆ ನಮ್ಮಮ್ಮ ಬಾಯಿಗೆ ಹೊಡೆದಿದ್ದುಂಟು. ಅಂಥ ಅನಿಷ್ಟ ಮಾತುಗಳನ್ನು ಅಂದರೆ ಹಾಗೆಯೇ ಆಗಿಬಿಡುತ್ತದೆ ಎಂದು ಅವರ ಸಿದ್ಧಾಂತ. ಆದರೆ ನಮ್ಮ 'ದರಿದ ನಾರಾಯಣ'ನನ್ನ ಕಂಡಾಗ ನಮ್ಮಮ್ಮನ ತಿಳಿವಳಿಕೆಯ ಕುರಿತು ಒಮ್ಮೆಗೆ ಅನು ಮಾನಿಸುವಂತಾಗುತ್ತದೆ.

—: ರಾಮಕೃಷ್ಣ

# ರೇಡಿಯೋ ಸೌತೇಕಾಯಿಗಳು

ಒಟ್ನಾರೆ ಈ ಅಮೇರಿಕದವರಿಂದ ಉಳಿಗಾಲವಿಲ್ಲ. ಹೈಡ್ರೋಜೆನ್ ಬಾಂಬಂತೆ; ನೈಟ್ರೋಜಿನ್ ಬಾಂಬಂತೆ; ಕೋಬಾಲ್ಟಂತೆ; ಇನ್ನೊಂದಂತೆ—ಇನ್ನು ಅವುಗಳ ಶಕ್ತಿ ಎಷ್ಟಿದೆ ಅಂತ ಪರೀಕ್ಷೆಮಾಡಿ ನೋಡೋದಂತೆ! ಆ ಪರಿ—ಗಿರೀಕ್ಷೆಗಳು ನಡೆಯೋದೋ—ಯಾರು ಯಾರ ಮನೆ ಬಾಗಿಲಲ್ಲಿ. ತೋಟ ಕೆಡಿಸಿದ್ದಲ್ಲದೆ, ಕಪಿ ಭಾವಿ ನೀರೆಲ್ಲ ಕೆಡಿಸಿತು ಅಂತ ಗಾದೆ ಇದೆಯಲ್ಲ—ಹಾಗೆ ಕಡಲು ಕಡಲನ್ನೇ ಹಾಳು ಮಾಡುತ್ತಿದಾರಲ್ಲ ಈ ಜನಗಳು. ಈ ಮೂಡಲ ದೇಶದವರಿಗೆ ಏನೇನು ಕಾದಿದೆಯೋ ಅಂದುಕೊಂಡಿದ್ದೆ. ಆದರೆ ಇಷ್ಟುರಲ್ಲಿಯೇ ಈ ಗಂಡಾಂತರ ಮನೆ ಬಾಗಿಲಿಗೇ ಬರುತ್ತೆಂದು ನಾನೆಣಿಸಿರಲಿಲ್ಲ.

ನಮ್ಮ ಗಿರಿಯು ಹೇಳುವ ಸಮಾಚಾರ ಕೇಳಿದರೆ ಹೊಟ್ಟೆಯಲ್ಲಿ ಪುಕ ಪುಕ ಅನ್ನಿಸುತ್ತಪ್ಪ ಕರಾವಳಿಯಲ್ಲಿ ಬದುಕುವ ಜನರಿಗೆ ಏನೇನು ಕಾದಿದೆಯೋ ದೇವರೇ ಬಲ್ಲ.

ನೆಂಟರ ಮನೆಗೆ ಹೋಗಿದ್ದ ಗಿರಿಯು ಒಂದು ಭೀಷಣವಾರ್ತೆ ತಂದಿದ್ದಾನೆ. ಗಿರಿಯನ ಅತ್ತೆ ಹಠಾತ್ತಾಗಿ ತೀರಿಕೊಂಡ ಸಮಾಚಾರ ಅದು.

ಕರಾವಳಿ ಜನರ ತರಕಾರಿ ಕಡಲು ಬಾಳೆಯ ಕಾಯಿ ಅಂತ ಇದ್ದೆ ಇದೆಯಲ್ಲ. ಗಿರಿಯು ಹೋದಾಗ ನೆಂಟರ ಮನೆಯವರು ಅದನ್ನೇ ತಂದು ಘರವಾಯಿಶಿ ಔತಣ ಮಾಡಿಸಿದ್ದರಂತೆ. ಎಲ್ಲರೂ ಉಂಡಹಾಗೆಯೇ ಆ ಅತ್ತೆಯೂ ಉಂಡಳು ಆದರೆ ಏನು ಗ್ರಹಚಾರವೋ—ರಾತ್ರಿ ಬೆಳಗಾಗುವುದರೊಳಗೆ ಆಕೆಯ ಗಂಟಲು ಬಾತುಕೊಂಡು ರುಂಡ ಮುಂಡ ಒಂದೇ ಆದ ಹಾಗೆ ಆಗಿಬಿಟ್ಟಿತ್ತಂತೆ. ಹಾಗೆ ಮೀನು ಮುಳ್ಳು ಗಂಟಲಲ್ಲಿ ಸಿಕ್ಕಿ ಬೀಳುವುದು ಸಾಮಾನ್ಯವಾದದ್ದೇ ಅದನ್ನು ಅಲ್ಲಿಂದ ಉಚ್ಚಾಟನೆ ಮಾಡಬಲ್ಲ ತಜ್ಞರಿಗೂ ಕಡಮೆಯಿಲ್ಲ ಹಳ್ಳಿಗಳಲ್ಲಿ ಗಿರಿಯನ ನೆಂಟರ ಊರಿನ ದೇವು ಪಂಡಿತನಿಗಂತೂ ಆ ಕೆಲಸ ಬಲು ಸುಲಭವಂತೆ.

ಆದರೆ ಆತನಿಗೆ ಗಿರಿಯನ ಅತ್ತೆಯನ್ನು ಉಳಿಸಲು ಸಾಧ್ಯವಾಯಿತೆ? ಇಲ್ಲ. ಆತ ಮಾಡಿದ ಪ್ರಯತ್ನಕ್ಕೇನೂ ಕಡಮೆಯಿಲ್ಲವಂತೆ. ಅಂದಮೇಲೆ ಹಾಗೇಕಾಯಿತು? ಅದರ ಗುಟ್ಟನ್ನು ಪಂಡಿತರು ಗಿರಿಯನ್ನ ಕರೆದು ಆಮೇಲೆ ಹೇಳಿದರಂತೆ—"ನೋಡು, ಗಿರಿಯು—ಅಮೇರಿಕದವರು ಸಮುದ್ರಕ್ಕೆಲ್ಲ ಬಾಂಬು ಹಾಕಿ ಮೀನುಗಳೆಲ್ಲ ವಿಷವಾಗಿ ಹೋಗುತ್ತಾ ಇವೆ. ಇಂಥ ಕೆಟ್ಟು ಹೋದ ಮೀನುಗಳಿಗೆ 'ರೇಡಿಯೋ' ಮೀನು ಅಂತಾರೆ ಇದೆಲ್ಲಾ ಪೇಪರಲ್ಲಿ ಬಂದಿದೆ. ನಿನ್ನತ್ತೆ ಪಾಲಿಗೆ

ಬಂದಿದ್ದು ಅಂಥ ಮೀನಿರಬೇಕು. ಇದು ಮೊನ್ನೆ ಮೊನ್ನೆ ತಲೆದೂರಿದ ಗಂಡಾಂತರ ವಾದ್ದರಿಂದ ಅದಕ್ಕೆ ಚಿಕಿತ್ಸೆ ಇನ್ನೂ ಇಲ್ಲ. ಸದ್ಯದಲ್ಲಿ ಕಂಡುಹಿಡಿಯುತ್ತೇನೆ" ಪಾಪ, ಆ ಹೆಂಗಸಿನ ದುರ್ದೈವ!

ಪಂಡಿತರೇ ಹಾಗೆ ಹೇಳಿದ ಮೇಲೆ ಇನ್ನೇನನ್ನಬೇಕು? ಮಾರಿ ಮನೆ ಬಾಗಿಲಿಗೇ ಬಂದಹಾಗಾಯಿತು. ನಮಗೇನೋ ಗಿರಿಯ ಹೇಳಿದ ರೇಡಿಯೋ ಮೀನುಗಳ ಭಯವಿಲ್ಲ ಏಕೆಂದರೆ ನಾವು ಕಡಲು ಬಾಳೆಯ ಕಾಯಿಗಳಿಂದ ದೂರ. ಆದರೆ ಒಂದು ಮಾತ್ರ ಗೋಳು. ಬೇಡ ಬೇಡ ಎಂದು ಬಡಕೊಳ್ಳುತ್ತಿದ್ದ ಹಾಗೆಯೇ ನಾವು ನೆಟ್ಟ ಸೌತೆ ಗಿಡಗಳ ಬುಡುಕ್ಕೆ ಗಿರಿಯ ಮೀನುಗೊಬ್ಬರ ಹಾಕಿದ್ದಾನೆ. ಆ ಗೊಬ್ಬರದಲ್ಲಿ ಎಲ್ಲಿಯಾದರೂ Radio Active ಮೀನುಗಳಿದ್ದಿದ್ದ ಪಕ್ಷದಲ್ಲಿ ನಮ್ಮ ಗತೀ ರೇಡಿಯೋ ಸೌತೆಕಾಯಿಗಳನ್ನು ತಿಂದು, ಪ್ರಾಣಕ್ಕೆ ಎರವಾಗುವ ಕಾಲವೂ ಹತ್ತಿರವಿದೆಯೋ ಏನೊ.

—: ರಾಮಕೃಷ್ಣ




ಫಜಲ್ ಅಲಿ ಕಮಿಟಿಯೋರ ಹತ್ತಿರ ನೀವೇನು ಹೇಳಿದಿರಿ? ಶೆಟ್ಟರೆ?

—ಆಂಧ್ರದೋರು ನಮ್ಮ ಹತ್ತಿರ ವ್ಯಾಪಾರ ಮಾಡಲಿ ಕನ್ನಡದೋರೂ ಮಾಡಲಿ. ಅಂತ ಹೇಳಿದೆ ರಾಯರೆ! ನಮಗೆ ಇದು ಅದು ಅಂತ ಭೇದವೇ ಇಲ್ಲ!!

# ಅನರ್ಥಕೋಶ

---

**ಆಪತ್ಕಾಲ:**—ಇಂದೂ ಮುಂದೂ ಎಂದೂ

**ಉಪದೇಶ:**—ನೀರಲ್ಲಿ ಬಿದ್ದವನಿಗೆ ನೆಲದಮೇಲಿಂದ ನಾವು ನೀಡುವ ಸಹಾಯ

**ಐಕ್:**– ಐಕ್ ಬಂದರೂ ಐಕಮತ್ಯ ಬರಲಿಲ್ಲ (ಅಮೆರಿಕನ್ ಗಾದೆ)

**ಚದುರಂಗಸೇನೆ:**—ರಷ್ಯಾದ ಚದುರಂಗದಾಟದ ಕುಶಲರ ಪಡೆ

**ಪರಿಶೀಲಿಸಲಾಗುತ್ತದೆ :**—ಸರ್ಕಾರಿ ಭಾಷೆಯಲ್ಲಿ, "ಮಾಡುವಂತೆಯೇ ಇಲ್ಲ"

**ಬಾಗಿಲು :**—"ವೇ ಇನ್" (ಹೋಗಲು ಎಂಬುದನ್ನು ನೋಡಿ)

**ಮೇರುಗಂಡ:**—ತೇನ್ ಸಿಂಗ್

**ಮೇರುಭೂತ:**—ಅಬಾಮಿನ ಬಿಲ್ ಸ್ಲೋಮನ್ ಎಂಬ ಪ್ರಾಣಿವಿಶೇಷ

**ರಸ್ತೆ:**—ಎರಡು ಕಡೆಗಳಲ್ಲಿ ವಾಸಮಾಡುವ ಜನರು ಕಸವನ್ನೆಸೆಯಲು ತೆರವಾಗಿರಿಸಲಾದ ಖಾಲಿ ಜಾಗ.—ಮಕ್ಕಳಿಗೂ ಮೀಸಲಾದ ಜಾಗ.

**ವಿಟವೃಕ್ಷ:**—ಹಲವು ಪಾರ್ಕುಗಳಲ್ಲಿ ಇಂಥವು ಉಂಟು.

**ವೈರಾಗ್ಯ :**—ಆಗಾಗ್ಗೆ ನಮ್ಮೆಲ್ಲರನ್ನೂ ಬಡಿಯುವ ಒಂದು ವ್ಯಾಧಿ

**ಹೃದಯ:**—ಹೃದಯವೇ ಇಲ್ಲದ ಅನೇಕರು ಬಾಳಿ ಬದುಕಿ ಶ್ರೀಮಂತರಾಗಬಲ್ಲರು.

**ಹೋಗಿಲು :**—"ವೇ ಔಟ್" (ಬಾಗಿಲು ಎಂಬುದನ್ನು ನೋಡಿ)

**ಹೈರಾವತ :**—ಬಾಡಿಗೆಗೆ ದುಡಿಯುವ ಆನೆ

**ಹೈಹಯ:**—ಹೈ ಹೈ ಎಂದು ಕೂಗಿಕೊಂಡರೆ ಮಾತ್ರ ಓಡುವ ಕುದುರೆ.

—:ನಾ. ಕಸ್ತೂರಿ

# ಶ್ರೀರಾಮ ರಕ್ಷೆ

---

ನಾವು ಹೇಳಿದರೆ ಕೇಳುವವನಾದರೆ, ಹೇಳಿದ್ದಕ್ಕ್ಕೂ ಮರ್ಯಾದೆ ಬರುತ್ತೆ. ವೆಂಕಪ್ಪಯ್ಯ ಮಾತುಕೇಳುವವನೆ! ಅವನ ಜಾಯಮಾನವೇ ಅಷ್ಟು—ಎಂಥದೋ ಒಂದು ವಂದನಾರ್ಪಣೆ ಮಾಡಿ ಕೈತಟ್ಟಿಸಿಕೊಳ್ಳದಿದ್ದರೆ ಅವನಿಗೆ ತಿಂದ ಅನ್ನವೇ ಮೈಗೆ ಹತ್ತೊಲ್ಲ.

ಯಾವುದೇ ಸಭೆಯಿರಲಿ—ವಂದನಾರ್ಪಣೆ ನಂದೇ ಇರಲಿ ಅನ್ನುತ್ತಾನೆ. ನಮ್ಮ ಬೀದಿಯ ಹೈದರಿಗೆಲ್ಲಾ ಇವನೇ ಮುಂದಾಳು. ಕಾಮನ ಹುಣ್ಣಿಮೆ—ರಾಮ ನವಮಿ - ತ್ಯಾಗರಾಜ ಆರಾಧನೆ - ಪುರಂದರ ವಿಠ್ಠಲ - ಯಾವುದಿದ್ದರೂ ಸರಿ ಫೋಟೊಕ್ಕೆ ಹಾರಾ ಹಾಕಿ ಜಮಖಾನೆ ಹಾಸಿ ಸಭಿಕರಿಗಾಗಿ ಕಾಯುವನು.

"ಬೇಡಕಣೊ ಮಹರಾಯ ಮನೆಯಲ್ಲಿ ಶ್ರೀರಾಮಕೃಪೆ ಅಂತ ತುಳಸಿದಳ ಇಟ್ಟು ಕೈಜೋಡಿಸು ಎಲ್ಲಾ ದೇವರು ಅದೇಯ-ಇದೆಲ್ಲಾ ಪಟರಂಗ ಯಾಕೆ" ಎಂದು ಹೇಳಿದೆ. ನಾನು ಹೇಳ್ತಲೆ ಇರಲಿಲ್ಲ-ನಮ್ಮ ಮನೆಗೆ ಬಂದು ಯಥಾಪ್ರಕಾರ ಲೆಖ್ಖಾ ಚಾರಕ್ಕೆ ತೊಡಗಿದ "ಹಾರ-ಭಾಗವತರಿಗೆ ಧಡೂತಿ ಯಾದ್ದು-ಪಿಟೀಲಿನವನಿಗೆ ಮೃದಂಗದವನಿಗೆ ಸಾಧಾರಣವಾದ್ದು ಇನ್ನೂ ತಂಬೂರಿಯವನಿಗೆ ಬರೀವಂದನೆಗಳು ಸಾಲದೇ-ಹೋಗ್ತ ಬರ್‍ತ ಅವರಿಗೆ ಗಾಡಿ-ಇನ್ನೂ ಮೆಣಸು ಕಲ್ಸಕ್ರೆ-ಕಾಫಿ-ಬಾದಾಮಿಹಾಲು ಇವತ್ತೆಲ್ಲಾ ನಾಲ್ಕು ರೂಪಾಯಿಯೊಳಗೆ ಆಗಿಹೋಗತ್ತೆ" ಎಂಬು ನನ್ನ ಷರಟಿನ ಗುಂಡಿ ತಿರುಚಿದ.

ಅವನದೊಂದು ದುರಭ್ಯಾಸ ಎದುರುಗಿನವರು ಯಾರೇ ಇರಲಿ ಅವರ ಷರಟಿನ ಗುಂಡಿ ಬಿಚ್ಚಿಹಾಕಿ ತಿರುಚಿ ಪೀಡಿಸಿ ಮಾತನಾಡುವ. ಅನೇಕರು ಇವನನ್ನು ಕಂಡೊಡನೇ ಷರಟು ಬಿಚ್ಚಿಡುವರು. ಮತ್ತೆ ಕೆಲವರು ಅವನು ಬಂದೊಡನೇ ಚಂದಾ ಪಟ್ಟಿಗೆ ಸಹಿಹಾಕಿ ಶ್ರೀರಾಮರಕ್ಷೆ ಎಂದು ಕೈಮುಗಿದು ಬಿಡುವರು. ಅವರೇ ಪುಣ್ಯಾತ್ಮರು.

ನಾನು ಅವನಿಂದ ಪಾರಾಗುವಹಾಗೇ ಇಲ್ಲ. ಅವನ ಬಾಲರಾಮ ಮಂಡಲಿಯ ಅಧ್ಯಕ್ಷಗಿರಿ ಬೇಡ ಬೇಡ ವೆಂದರೂ ನನ್ನ ತಲೆಗೇ ಕಟ್ಟಿದಾನೆ. ಅವನೇ ಕಾರ್ಯದರ್ಶಿ.

ಅವನ ಮಾತಿಗೆ ಏನು ಹೇಳುವುದು? "ಯಾರಾದಾರೂ ಚಿಲ್ರೆ ಭಾಗವತರನ ಕರಿ–ಅವರೂ ಬಂದು ಹಾಡುಬೇಕೂಂತ ಇರಬೇಕು–ನಿನ್ನ ಸೇವೇನೂ ನಡೆದಿರ ಬೇಕು"

"ಅದಕ್ಕೆ ನಿನ್ನ ಹತ್ತಿರ ಬಂದದ್ದು ಆ ಲಂಬೋದರ ಭಾಗವತರ ಹತ್ತಿರ ಹೋಗೋಣಾಂತ"

"ಲಂಬೋದರ ಭಾಗವತರು? "

"ಅದೇ ಆ ಮೂಲೆಮನೆ ತ್ರಿಯಂಬಕನ ಮನೆಗೆ ಬಂದಿದ್ದಾನಲ್ಲಾ"

"ಆಮನೆ ಪಕ್ಕದ ಮನೆಯೂ ಖಾಲಿಯಾಗಿದೆಯಂತೆ"

"ಹೌದು ನನ್ನ ಜೊತೆ ಕೆಲ್ಸಮಾಡ್ತಾ ಇರ್ಲಿಲ್ವಾ ಮಾಧು ಅವನೇ ಇದ್ದಿದ್ದು ಅಲ್ಲಿ"

"ಅವನ್ಯಾಕೆ ಬಿಟ್ಟ?"

"ಈ ಲಂಬೋದರ ಭಾಗವತರು ಪಕ್ಕದ ಮನೆಗೆ ಬಂದಮೇಲೆ ಅಲ್ಲಿ ಯಾರಿರಲು ಸಾಧ್ಯ?"

"ಪಾಪ"

"ಆ ಮಾಧೂಗೆ ಪಾಪಾಂತ ಅಂದವರುಂಟೆ–ನಾನು ಮಾಡ್ತಿರೋ ಈ ರಾಮ ಸೇವೆ ನನಗೆ ಉಳಿಯುವ ಹಣದ ಆಸೆ ಇಂದ್ಲೆ ಮಾಡ್ತ ಇದ್ದೀನಂತೆ. ಇನ್ನು ಆಫೀಸಲ್ಲಿ ನನ್ನ ಮೇಲೆ ಚಾಡಿಛಿದ್ರ–ಹೀಗಿರುವಾಗ ಲಂಬೋದರ ಭಾಗವತರಿಗೆ ಮನೆ ಕೊಡಿಸಿದ್ದು ನಾನೇ ಅಂತ ಅಂದರೆ–ಈಗ ಅರ್ಥವಾಯ್ತು....ವಿಷಯ"

"ಸರಿ ಸರಿ–ಒಂದೇ ಕಲ್ಲು ಎರಡು ಮಾವಿನಕಾಯಿ ತಾನೇ–ನಿನ್ನ ಶಾಮುನವಮಿಗೆ ದಾಕ್ಷಿಣ್ಯಕ್ಕೆ ಬಲೆಗೆ ಹಾಕಿ ಕೊಳ್ಳೋಕೆ ಭಾಗವತರಿಗೆ ಮನೆ ಕೊಡಸಿದ ಹಾಗಾಯ್ತು ...ಮತ್ತೆ ಮಾಧೂನ ಮನೆ ಬಿಡಿಸಿ ಪೀಡಿಸಿದ ಹಾಗೂ ಆಯ್ತು ಅಲ್ಲವೇ"

"ಅಷ್ಟಲ್ದೇ ನಮ್ಮ ಮಂಡಲಿ ಅಧ್ಯಕ್ಷರಾಗ್ತೀರ ನೀವು"

—ಎಂದು ಗುಂಡಿಗೆ ಕೈಹಾಕುವುದರಲ್ಲೆ ಅವನ ಕೈಗೆ ಕಾಫಿ ಲೋಟ ಕೊಟ್ಟೆ. ಅದನ್ನ ಹೀರಿ ಬನ್ನಿ ಹೊರಡೋಣ ಎಂದ.—

"ಎಲ್ಲಿಗಯ್ಯಾ"

"ಅದೇ ಲಂಬೋದರಭಾಗವತರ ಮನೆಗೆ"

"ನೀನೇ ಹೋಗಿ ಬಾರಯ್ಯ"

"ಉಂಟೇ–ಅಧ್ಯಕ್ಷ ಮಹಾಶಯರು ಬಂದರೇ ಮರ್ಯಾದೆ... "

"ಅದು ಸರಿ–ಕಚೇರಿ ಕರ್ಚಿಗೆ?"

"ಅದರ ಯೋಚನೆ ನೀವು ಬಿಡಿ–ನಾನೊಂದು ಉಪಾಯ ಮಾಡ್ತೀನಿ"

"ಇಷ್ಟೊಂದು ಪಟರಂಗ ಪಟ್ಟುಕೊಂಡು ಅದ್ದೂರಿಯ ಉತ್ಸಾವ ಇಲ್ಲದಿದ್ದರೇನಪ್ಪ ಈಗ"

"ನೀವು ಯಾವಾಗಲೂ ಹೀಗೇ–ಬನ್ನಿ ಯಜಮಾನ್ರೆ...."

—ಎಂದು ಎಳೆದೇ ಒಯ್ದ ನನ್ನ. ಜುಬ್ಬಹಾಕಿ ವಲ್ಲಿ ಹೊದ್ದು "ಬರ್‍ತೀನಿ ಕಣೇ ಮುಂಬಾಗಿಲಿಕ್ಕೊ" ಎಂದು ಮಡದಿಗೆ ಬೈಬೈ ಹೇಳಿ ಹೊರಬಿದ್ದಾಗ ಹತ್ತು ಘಂಟೆ ಯಾಗಿತ್ತು.

ದಾರಿಯುದ್ದಕ್ಕು ವೆಂಕಪ್ಪಯ್ಯ ಬಿಡುವಿಲ್ಲದೆ ಮಾತನಾಡಿದ. ಮಂಡಲಿಯ ಆರ್ಥಿಕ ಪರಿಸ್ಥಿತಿ ಸುಧಾರಿಸಲಿಕ್ಕೆ ಮೂರುದಾರಿ ಸಾವಿರ ವಿಧಾನ ಹೇಳಿದ. ನಂಗೆ ಎಲ್ಲಕ್ಕಿಂತ ಬೀಸುವ ದೊಣ್ಣೆ ನಾಡಿದ್ದಿನ ಕಾರ್ಯಕ್ರಮ ಹೇಗೆ ನಡೆದೀತೂ ಎನ್ನುವ ಚಿಂತೆ. ಮತ್ತೆ ನಾನೇ ಚುಚ್ಚಿದೆ-

"ನಾಡಿದ್ದಿಗೆ ಏನುಮಾಡ್ತಿಯಪ್ಪಾ ಅ'ೕನೋ ಉಪಾಯ ಅಂತ ಅಂದೆ.... ಹೇಳು ಮನಸ್ಸು ಸಮಾಧಾನವಾದರೂ ಆಗತ್ತೆ."

"ಆರ್‍ತಿ ತಟ್ಟೆ...."

"ಅದು ಕಡೇ ಕಾರ್ಯಕ್ರಮ–ಅದಕ್ಕೆ ಮುಂಚಿನ ಕರ್ಚು?...."

"ಸಾಲಹೇಳಿ ನಾನು ನಡಸ್ತೀನಿ....ಸಿರಸ್ತೆದಾರ್‍ರು ಐದುರೂಪಾಯಿ ಕೊಡ್ತೀನೀಂತ ಅಂದಿದ್ದಾರೆ ..."

"ಸರಿ ನಿನ್ನ ಧೈರ್ಯ...."

—ಎಂಬಲ್ಲಿಗೆ ಲಂಬೋದರ ಭಾಗವತರ ಮನೆಯ ಮುಂದೇ ಬಂದಿದ್ದೆವು. ಬೋರ್ಡು ಢಾಳವಾಗಿ ಬರೆದಿದ್ದರು "ಸಂಗೀತ ವಿದ್ವಾನ್–ಲಂಬೋದರ ಭಾಗವತರ್" ಏನು ಹೆಸರು? ವೆಂಕಪ್ಪಯ್ಯನೇ ಕೂಗಿದ.

"ಭಾಗವತರೇ...."

—ಇಸಮು ಮಾತಾಡದೇ ಹೊರಬಿತ್ತು. ಮೂರುವರೆ ಅಡಿ ಎತ್ತರ ಮೂರು ಅಡಿ ಅಗಲ–ಸಾಕ್ಷಾತ್ ಲಂಬೋದರನೇ ಸೊಂಡಿಲೊಂದಿದ್ದಿದ್ದರೆ.

ವೆಂಕಪ್ಪಯ್ಯನನ್ನೂ ಕಂಡೊಡನೇ "ಓ ಹೊ ಹೋ....ದಯಮಾಡಿಸಬೇಕು...." ಎಂದು ಗಟ್ಟಿಯಾಗಿ ಅಲೆ ಅಲೆ ಯಾಗಿ ಗೊಗ್ಗರವಾಗಿ ಹೊರಟ ನಾದ ಸಂಪತ್ತು ಕೇಳಿ ಹಾಡಿದರೆ ಇನ್ನು ಹೇಗೋ ಎಂದು ನಾನು ತಳಮಳಿಸಿದೆ.

"ಒಳಗೆ ಬನ್ನಿ–ಚಾಪೆ ಮೇಲೆ ಕಾಫಿ" ಉಹೂಂ–ಆ ಸುದ್ದಿಯೇ ಇಲ್ಲ ಅವರೇ ಬೀದಿಗೆ ಬಂದರು. ಬಂದು ಒಂಟಿಕಾಲಲ್ಲಿ ನಿಂತು ಒಂದೇಸಮ ಅದು ಯಾರೋ

ಪಾಪಯ್ಯ ಭಾಗವತರನ್ನು ಬೈಯ್ಯ ತೊಡಗಿದ ವೆಂಕಪ್ಪಯ್ಯನಿಗೆ ಆ ಮಾತಿನಿಂದ ಪ್ರಸ್ತುತ ಬಂದ ಕಾರ್ಯದ ಕಡೆ ಮಾತು ತಿರುಗಿಸಬೇಕಾದರೆ ಸಾಕುಸಾಕಾಗಿ ಹೋಯಿತು—

"—ಅವನ ತಲೆ....ಧನ್ಯಾಸಿ ಕೇಳಿದರೆ–ಸನ್ಯಾಸಿಯಾಗಿ ಹೋಗಲೇ ಅಂತ ಅನ್ನತ್ತೆ"

"ನಾಡಿದ್ದು ಶನಿವಾರ...."

"ನಿನ್ನೆ ಇತ್ತು ಆ ಪ್ರಾರಬ್ಧದ ಕಚೇರಿ ವೆಂಕಪ್ಪಯ್ಯ-ಕರಹರಪ್ರಿಯ ಕಲಹ ಪ್ರಿಯವಾಗಿತ್ತು-ಹಂಸಧ್ವನಿ ಹಿಂಸೆಧ್ವನಿಯಾಗಿತ್ತು-ಸಾಹನ ಸಹಿಸಿದವರುಂಟೆ-ದೇವಮನೋಹರಿ ಹರೋಹರ ಅವರಂಥ ಚಿಲ್ರೆ ಸಂಗೀತಗಾರ್ರಿಂದ ನಮ್ಮಂಥವರು ತಲೆ ಎತ್ತಿ ತಿರಿಗಾಡೋ ಹಾಗಿಲ್ಲ ವೆಂಕಪ್ಪಯ್ಯ...."

"ಪಿಟೀಲಿಗೆ ಪಾಪಯ್ಯನಿಗೆ ಹೇಳಿದ್ದೀನಿ...."

"ಆ ಪಂಚಾಕ್ಷರಿ ಪಿಟೀಲು ಬಾರಿಸಿದ ಅವತ್ತು-ನಾನೇನಾದರೂ ಹಾಡ್ತಿದ್ದರೆ ಪಿಟೀಲ ಕಮಾನಿಂದಲೇ ಅವನಿಗೆ ಬಾರಿಸ್ತಿದ್ದೆ....ಪಾಪಯ್ಯ ಎಷ್ಟೋವಾಸಿ-ಅವ ಅಪಶೃತಿ ಕೊರೆಯೋಲ್ಲ"

"ಹಾಗಾದರೆ ನಾಡಿದ್ದು ಪುರುಸೊತ್ತಾಗಿರ್ತಿರೀಂತ ತಿಳಿಯಲೇ... ದೊಡ್ಡ ಮನಸ್ಸು ಮಾಡಬೇಕು"

"ದೇವರ ಸೇವೇಂತ ಅಂದ್ರೆ ನಾನು ಬಿಟ್ಟಬಾಯಿ ಮುಚ್ಕೊಲ್ಲ ಬೇಕಾದ್ರೆ ಆದರೇ ..."

"ಆದರೇನು...."

"ಮೃದಂಗದವನಿಗೇನು ಮಾಡ್ತೀರಿ?"

"ನಿಮ್ಮ ಹುಡುಗ ಇದ್ದಾನಲ್ಲಾ"

"ಅವನು ಊರಲ್ಲಿ ಇರುಲ್ಲ"

"ಮಹದೇವನಿಗೆ ಹೇಳಲೇ"

"ತಂಬೂರಿಗೆ?"

"ನಿಮ್ಮ ತಮ್ಮಯ್ಯಾ ಇಲ್ವೆ"

"ಶರಿ ಅದಕ್ಕೆ ಹೇಳ್ತಿನಿ....ಆದರೇ"

"ಆದರೇನು?"

" ...ಏನೂ ಇಲ್ಲ ಅವತ್ತು ನನಗೆ ಒಂದು ಕಚೇರಿ ಇದೆ"

— ನಾನು ಸುಸ್ತು, ಇಷ್ಟುಹೊತ್ತು ನೀರಿನಲ್ಲಿ ಸೋಪು ತೊಳೆದ ಹಾಗಾಯ್ತಲ್ಲ ಮಾತಾಡಿದ್ದು... ವೆಂಕಪ್ಪಯ್ಯನಿಗೆ ಗೊತ್ತು ಅವನ ಮಾತಿನ ರೀತಿ.

"ಕಚೇರಿ ಎಲ್ಲೀದು?"

"ಮದುವೆ ಮನೇದು ನೂರು ರೂಪಾಯಿ ಮಾತಾಡಿದ್ದೀನಿ"

"ಮತ್ತೆ ಮೊದಲೇ ಹೇಳಬಾರದಿತ್ತೇ....

—ನನಗೆ ಅನುಮಾನ ರಾಮನವಮಿ ಸೀಸನ್ನಿನಲ್ಲಿ ಮದುವೆ ಮುಹೂರ್ತಗಳಿರುವುದುಂಟೆ?

"ಯೋಚನೆಮಾಡ್ತಾ ಇದ್ದೀನಿ"

"ನೋಡಿ ಭಾಗೋತರೆ – ನಮಗೆ ಪುರುಸೊತ್ತಿಲ್ಲ – ನೂರುಗೀರು ಬಡಮುಂಡಲಿ ಎಲ್ಲಿಂದ ತಂದೀತು....ಹದಿನೈದು ತೆಂಗಿನಕಾಯಿ"

—ಭಾಗವತರು ಸುಸ್ತು - ಬಿಟ್ಟರೆ ಆ ಕಚೇರಿಯೂ ಇಲ್ಲವೆಂದು ಅವರಿಗೆ ಗೊತ್ತು.

"ಮೃದಂಗದವನಿಗೆ ಹತ್ತು–ತಂಬೂರಿಯವನಿಗೆ ಹದಿನೈದು, ನನಗೇ – ಮಕ್ಕಳೊಂದಿಗ ವೆಂಕಪ್ಪಯ್ಯ–ಇಪ್ಪತ್ತೈದು .. ಪಿಟೀಲಿನವರಿಗೆ ನಿಮ್ಮದೇ ಮಾತುಕಥೆ...."

"ನೋಡಿಸ್ವಾಮಿ ಚಿದಂಬರಭಾಗವತರು ಈ ಕ್ಷಣ ಬರೀ ಹಾರಕ್ಕೆ ಹಾಡ್ತಾರೆ– ನಿಮಗೆ ಶ್ರೀರಾಮಾ ಅಂತ ಅಂದು ಇಪ್ಪತ್ತೈದು ಕೈಗೆ ಹಾಕುವೆ... "

—ಎಂದು ವೆಂಕ ಅವರ ಷರಟಿನ ಗುಂಡಿ ತಿರುಚಿದ. ಒಂದೇಬಾರಿ ಅವರು "ಹೂಂ" ಎಂದು ಒಳಕ್ಕೆ ನಡದೇಬಿಟ್ಟರು. ವೆಂಕಪ್ಪಯ್ಯ ನಗುತ್ತಾ ನನ್ನ ಷರಟಿನ ಗುಂಡಿಗೆ ಬಂದ–ನಾನು "ಬೇಷ್" ಎಂದು ಸರಸರನೆ ಹೊರಟೆ.

ನಾಡಿದ್ದಿನ ಯೋಚನೆ ನಂದು–ವಂದನಾರ್ಪಣೆ ಮಾಡುವ ಸೊಗಸಿನ ಹಸನ್ಮುಖದ ಕಳೆ ವೆಂಕಪ್ಪಯ್ಯನ ಮುಖದಮೇಲೆ ಮೂಡಿತು.

* * *

"ಮಹನೀಯರೇ ಮಹಿಳೆಯರೇ ಆರತಿ ತಟ್ಟೆ ಬರ್ತಾ ಇದೆ ದಯವಿಟ್ಟು ಶ್ರೀರಾಮಚಂದ್ರಮೂರ್ತಿಯ ಕೃಪೆಗೆ ಪಾತ್ರರಾಗಬೇಕು. ಈ ದಿನ ತಾವು ಶ್ರೀಮಾನ್ ಸಂಗೀತ ವಿದೂಷಕ ಲಂಬೋದರಭಾಗವತರ ಸಂಗೀತದ ಸವಿ ನೋಡಿದ್ದೀರಿ. ಆದ್ದರಿಂದ ಅದರ ಬಗ್ಗೆ ನಾನೇನು ಹೇಳಲಿ? ಸೊಗಸಾದ ತಂಬೂರಿ ಶೃತಿ–ಅದ್ಭುತ ಪಿಟೀಲು ಮೃದಂಗದ ಠೇಂಕಾರದ ನಡುವೆ ಬಾಯಿಬಿಟ್ಟು ಅಪಸ್ವರ ಹೇಳದೆ ಪವಮಾನದ ತನಕ ಎಳೆದು ತಂದು ತ್ಯಾಗರಾಜವಿನುತ ತನಕ ನಮ್ಮನ್ನೂ ಕರೆತಂದು ಮುಕ್ತಾಯ ಹಾಡಿದ್ದಾರೆ. ಶ್ರೀರಾಮಚಂದ್ರಮೂರ್ತಿಯ ಭಕ್ತಾಗ್ರೇಸರ ಸಾಕ್ಷಾತ್

ಶ್ರೀ ಆಂಜನೇಯಮೂರ್ತಿಯೇ ಹೇಳಿದಂತೆ ನಮಗನ್ನಿಸಲಿಲ್ಲವೆ? ಶ್ರೀಯುತರು ಹೀಗೇ ವರ್ಷೇ ವರ್ಷೇ ಶ್ರೀರಾಮಚಂದ್ರನ ಕೃಪೆಗೀಡಾಗಿ ಆಸ್ತಿಕ ಮಹಾಜನ ಗಳನ್ನು ಸಂತೋಷಪಡಿಸಲೆಂದು ನನ್ನ ಆಸೆ... (ಪ್ರಚಂಡ ಕರತಾಡನ) ಈ ಪುಟ್ಟ ಪುಷ್ಪಹಾರ ಅವರ ಕೊರಳಿಗೆ ಚಿಕ್ಕದು ನಿಜ. ಆದರೂ ನಮ್ಮ ವಿಶ್ವಾಸ ದೊಡ್ಡದಿದೆ. ಅವರ ಅಭಿಮಾನ ಭಾರಿದಿದೆ ಇದನ್ನೇ ದೊಡ್ಡದೆಂದು ತಿಳಿದು ಸ್ವೀಕರಿಸಬೇಕು" (ಕರತಾಡನ)

—ಅಟ್ಟಹಾಸದ ಮಂದಹಾಸದ ಹೆಮ್ಮೆಯ ಕತ್ತನ್ನು ಮುಂದೆ ಚಾಚಿದರು ಲಂಬೋದರಭಾಗವತರು ಸಭಿಕರಿಗೆ ವಂದಿಸಿ ಹಾರ ಸ್ವೀಕರಿಸಿದರು. ಸಭಿಕರಲ್ಲಿ ಗಲಾಟೆಯಾಗಿ ಚದುರತೊಡಗಿದಾಗ ವೆಂಕಪ್ಪಯ್ಯ ಹೇಳಿದ "ಚರುಪುವುಂಟು ಕಡಲೆ ಗುಗ್ಗುರಿ....ದೇವರ ಪ್ರಸಾದ.

—ಚರುಪು ಎಂಬ ಮೂರು ಅಕ್ಷರ ಮೋಡಿಯನ್ನೆ ಮಾಡಿಸಿತು ಮಂದಿಯ ಮೇಲೆ. ಬಾಯಲ್ಲಿ ನೀರೂರಿಸಿ ಕಿವಿಚಾಚಿ ವೆಂಕಪ್ಪನ ವಂದನಾರ್ಪಣೆಗೆ ಸಿದ್ಧರಾದರು.—

"ಕಡೆಯದಾಗಿ ಶ್ರೀಮಾನ್ ತಂಬೂರಿ ತಮ್ಮಯ್ಯನವರು ಮೇಧಾವಿಗಳು. ಎಡಬಿಡದೆ ಹತ್ತಾರುವರ್ಷ ಶೃತಿ ಹಿಡಿದು ಪಳಗಿದ ನಾದಬ್ರಹ್ಮರ್ಷಿಗಳು...."

—ಎಂದಾಗ ಪಿಟೀಲು ವಿ|| ಪಾಪಯ್ಯ ಕಣ್ಣು ಪಿಳುಕಿಸಿದ. ಮೃದಂಗದಯ್ಯ ತೋಳು ಮಡಿಸಿ ಕಣ್ಣು ಕೆಂಪಗೆಮಾಡಿದ. ಎಲ್ಲಾದರೂವುಂಟೆ ಊರಿಗೆ ಮೊದಲು ತಂಬೂರಿಯವನಿಗೆ ಹಾರ ಹಾಕುವುದು? ಇದೆಲ್ಲಿಯ ಪದ್ಧತಿ.

—ವೆಂಕಪ್ಪಯ್ಯನ ತಮ್ಮನ ಮಗಳನ್ನು ಈ ತಮ್ಮಯ್ಯನ ಷಡ್ಕನಿಗೇ ಕೊಟ್ಟ ರೋದು–ಬಂಧುಪ್ರೇಮ–ಅಷ್ಟೂ ಬೇಡವೇ ಪಾಪ. ಅವನವನ ಪ್ರೀತಿವಿಶ್ವಾಸವಿದ್ದರೆ ಮನೇಲಿ. ತುಂಬಿದ ಸಭೇಲಿ ಸೋದರಮಾವಾಂತ ತಂಬೂರಿಯವನಿಗೆ ಅಗ್ರಸ್ಥಾನ ಕೊಡುವುದೇ_ಸಹಜವೇ, ಸಿಟ್ಟು ಬರುವ ಮಾತೇ

—ಇದನ್ನೆಲ್ಲಾ ವೆಂಕಪ್ಪಯ್ಯ ಲಕ್ಷಿಸಲೇ ಇಲ್ಲ. ಅವನ ಪಾಡಿಗವನು ವಿದ್ವಾನ್ ತಂಬೂರಿ ತಮ್ಮಯ್ಯನವರನ್ನು ಅರ್ಧ ಗಂಟೆ ಹೊಗಳಿದ. "ಹಾಳಾದ್ದು ಚರುಪಿಲ್ಲದಿದ್ದರೆ ಹೋಗಬಹುದಿತ್ತು" ಎಂದು ಗೊಣಗಿದರು ಭಕ್ತಾದಿಗಳಲ್ಲಿ ಕೆಲವರು. ಎರಡು ಮಾತಿನಲ್ಲಿ ಪಿಟೀಲು ಪಾಪಯ್ಯ ಮೃದಂಗದ ಮಹದೇವನ್ನರನ್ನು ಹೊಗಳಿ ಹಾರಾ ಹಾಕಿದರು.

—ಪ್ರಸಾದ ವಿನಿಯೋಗ ಹೊಡೆದಾಟದ ತನಕಾ ಸಾಗಿ, ಮಾಮೂಲಿನಂತೆ ಮುಗಿಯಿತು.—ಸಭೆ ಚದುರಿತು.

ಅತ್ಯಾಶ್ಚರ್ಯ-ಎರಡೇ ಹಾರ ಒಂದು ತಮ್ಮಯ್ಯನ ಕೈಯ್ಯಲ್ಲಿ ಇನ್ನೊಂದು ಲಂಬೋದರರ ಹೆಗಲಮೇಲೆ. ಪಾಪಯ್ಯ ಕೆಂಡವಾದ-ಮಹದೇವ ಹಲ್ಲು ಕಡಿದ.

"ಯೋಗ್ಯತೆ ಇಲ್ದೆ ಇದ್ರೆ ಕಚೇರಿ ಮಾಡಿಸಲೇ ಬಾರದು-" ಎಂದ ಪಾಪಯ್ಯ.

"ಆದದ್ದೇನ್ರಿ ಈಗ"--ಭಾಗವತರು.

"ಆಗೋದೇನು--ಎರಡೇ ಹಾರದಲ್ಲಿ ಕೆಲಸ ಸಾಗಿಸಿದ್ದಾರೆ—ಭಾಗೋತರೇ ಇಂತಹ ಕಚೇರಿಗೆ ನಮ್ಮನ್ನ ಇನ್ಮೇಲೆ ಕರೀಲೇಬೇಡಿ ನಿಮ್ಮಹಾರ ನಮಗೆ ಹಾಕಿದ ಶಾಸ್ತ್ರಮಾಡಿ ಮತ್ತೆ ಕದ್ದು ನಿಮಗೆ ತಲುಪಿಸಿದ್ದರೆ—ಅನ್ಯಾಯ ಅವಮಾನ"

—ವೆಂಕಪ್ಪ ಸುಸ್ತು. ನಿಜ ಅವನು ಜಿಜ್ಞಾಸದಲ್ಲಿ ಸಿಕ್ಕು ಬಿದ್ದಿದ್ದ. ನಾನೇನು ಮಾಡಲಿ ನಾನು ಬರೀ ಅಧ್ಯಕ್ಷ ಕೋಶಾಧ್ಯಕ್ಷನಲ್ಲ. ಕಡೆಗೆ ನನಗೂ ವಂದನಾರ್ಪಣೆ ಬಂದರೆ ತೀರಿತು ಅಷ್ಟೆ. ವೆಂಕಪ್ಪಯ್ಯ ಆರ್ತಿ ತಟ್ಟೆ ದುಡ್ಡು ನೆಚ್ಚಿಕೊಂಡಿದ್ದ. ತಟ್ಟೆ ಎತ್ತಿಕೊಂಡು ಹೋದ ಹೈದ ಹಾಗೇ ಪರಾರಿವಾಗಿದ್ದ ತಟ್ಟೆ ಸಹಿತ.

ಹಾರದ ಬಾಬತ್ತಿಗೇ ಹೀಗಾದರೆ ಇನ್ನು ಜಟಕಾಕ್ಕೇನು ಗತಿ?

"ಹೋಗಲಿ ನಡೀರಯ್ಯ ಯೋಗ್ಯತೆ ಗೊತ್ತಾಯಿತಲ್ಲ ವೆಂಕಾ—ಗಾಡಿ ಎಲ್ಲಿ" ಎಂದ ಪಾಪಯ್ಯ ತಂಬೂರಿ ತಮ್ಮಯ್ಯ ತೆಪ್ಪನಿದ್ದ. ನಿದ್ರೆಮಾಡಲು ಗಾಡಿ ಎಲ್ಲಿಂದ ತರೋದು ಆರತಿ ತಟ್ಟೆ ನೆಚ್ಚಿಕೊಂಡು ಕೆಲಸ ಕೆಟ್ಟಿತು. ಆಗಲೀ ರಾತ್ರಿ ಹನ್ನೆರಡರ ಸಮಯ— ಏನು ಮಾಡುವುದು?

"ತಡೀರಯ್ಯ ಈಗ ತರ್ತೀನಿ" ಅಂತ ವೆಂಕಪ್ಪ ಹೊರಬಿದ್ದ. ಸಂಗೀತಗಾರರು ತಲೆಮೇಲೆ ಕೈಹೊತ್ತು ಕೂತರು. ಅರ್ಧ ಗಂಟೆಯಾದರೂ ವೆಂಕ ನಾಪತ್ತೆ. ಲಂಬೋದರರು ನನ್ನ ಬೈಯ್ಯ ತೊಡಗಿದರು. "ನಾನೇ ಹೋಗಿ ನೋಡ್ತೀನಿ" ಎಂದು ನಾನು ಎದ್ದು ಕತ್ತಲಲ್ಲಿ ಹೊರಬಿದ್ದು ಮನೆಕಡೆ ಓಡಿಹೋದೆ ದಾರಿ ಗೊತ್ತಾಗದೆ.

* *

ಕಗ್ಗತ್ತಲೆ-ಮಿಂಚು-ನಾಲ್ವರು ಹೊರಟಿದ್ದರು. ಮುಂದೆ ಲಂಬೋದರ, ಹಿಂದೆ ವಿ|| ತಂಬೂರಿಯವ, ಆಚೆ ಪಾಪಯ್ಯ, ಈಚೆ ಮಹದೇವ—ನಡೆದು ಹೊರಟಿದ್ದರು ವಾದ್ಯ ಹೊತ್ತು ಶ್ರೀರಾಮನ ಸೇವೆ ನಡೆಸಿ, ಕೃಪಾ ಸಂಪಾದಿಸಿ ಕಾಲು ಕಿತ್ತಿದ್ದರು.

"ಶ್ರೀರಾಮರಕ್ಷೆ"

—ದಾಶರಥಿ ದೀಕ್ಷಿತ್

---

# ಕೊರವನ ಮಕ್ಕಳ ಪುಸ್ತಕ

ಪಾಠ ೩

## ಊಟ. ಆಟ ವೋಟು.

ರಾಮು ಹಣ-ವಂತ. ಹೊಟ್ಟೆತುಂಬ ಊಟ ಸಿಗುತ್ತೆ. ಆ ಆಟ ಈ ಆಟ ಆಡಿ ಕಾಲಕಳೆಯುತ್ತಿದ್ದ. ಒಂದು ದಿನ ಚುನಾವಣೆ ಎಂದರು. ವೋಟು ಕೂಡಿ-ದರೆ ಅಧಿ-ಕಾರ ಎಂದರು. ಈ ಆಟಕ್ಕೆ ರಾಮು ಸೇರಿ-ಕೊಂಡ.

ಸೋಮು ಬಡವ. ಕಡು ಬಡವ. ಹೊಟ್ಟೆಗೆ ಒಂದು ಕಡುಬು ಕೂಡ ಸಿಗುವುದು ಕಷ್ಟ. ಬಲು ಕಷ್ಟಪಡುತಿದ್ದ. ಚುನಾ-ವಣೆ ಇವನ ಕಿವಿಗೂ ಬಿತ್ತು. 'ಏನೇ ಬರಲಿ ವೋಟೊಂದಿರಲಿ' ಎಂದು ಹಸಿದ ಸೋಮು ಕೂಗಿದ. ಗಟ್ಟಿಯಾಗಿ ಕೂಗಿದ.

ರಾಮು-ನಿಗೆ ಈ ಕೂಗು ಕೇಳಿಸಿತು. ಸೋಮುನ ಗಂಟಲು ಹಸಿದಾಗ ಹೀಗೆ ಇದ್ದರೆ ಹೊಟ್ಟೆಗೆ ಹಿಟ್ಟು ಬಿದ್ದರೆ? ಎಂದು ರಾಮು-ನಿಗೆ ಅನ್ನಿಸಿತು. ವೋಟಿನ ಆಟದಲ್ಲಿ ನನ್ನ ಕಡೆ ಆಡು ಎಂದ ರಾಮು, ಸೋಮುನಿಗೆ.

* * *

ಅಗೋ ನೋಡು! ಸಣಕಲ ಮನುಷ್ಯ ಯಾರು? ದೀಪದ ಕಂಭದ ಹತ್ತಿರ. ದೀಪದ ಕಂಬದಷ್ಟೇ ತೆಳುವು. ಅವನೇ ರಾಮು! ಚುನಾವಣೆ ಮುಗಿಯಿತು. ರಾಮುನೂ ಮುಗಿದ.

ಇಗೋ ನೋಡು! ಎಮ್ಮೆಯ ಹತ್ತಿರ ನಿಂತವ ಯಾರು? ಮೂರೆಮ್ಮೆಯ ಹಾಗೆ ಇರುವವ ಯಾರು? ಆಹಾ! ಈಗ ತಿಳಿಯಿತು ಸೋಮು. ಚುನಾವಣೆ ಮುಗಿಯಿತು. ಸೋಮುನ ಕಷ್ಟಮುಗಿಯಿತು. ಹೇಳಿ ಬರೆಯಿಸಿ.

| | | |
|---|---|---|
| ವೋಟು | ಆಟ | ಊಟ |
| ಬೆಪ್ಪ | ನಿಂತ | ಬಿದ್ದ |

# ಮಾನವತ್ವ

ಬೆಳಗ್ಗೆ 8-30 ಘಂಟೆ ಹೊತ್ತಿಗೆ ಮನೆಯಿಂದ ಬಸ್‌ಸ್ಟಾಪಿನ ಕಡೆ ಹೊರಟೆ. ನನ್ನ ಮುಂದೆ ಗ್ರೇಪ್ಯಾಂಟ್ಸ್, ಬಿಳಿ ರೇಷ್ಮೆಯ ಬುಷ್ ಷರ್ಟ್ ಧರಿಸಿದ್ದ ಒಬ್ಬ ಯುವಕ ಹೋಗುತ್ತಿದ್ದ. ಆತನ ಬಾಯಲ್ಲಿ ಒಂದು ಸಿಗರೇಟ್.

ಒಂದು ಹತ್ತು ಮಾರು ದೂರದಲ್ಲಿ, ನಮ್ಮ ಪುರಾತನ ದೇವಾಲಯಗಳ ಹಾಗೆ, ಅಧಿಕ ಅಲಂಕಾರ ಶೈಲಿಯಲ್ಲಿ ಕಟ್ಟಿದ್ದ ಬಂಗಲೆಯಿಂದ ಶ್ರೀಮಂತರೊಬ್ಬರು ಬಂದು ಬಸ್‌ಸ್ಟಾಪಿನ ಕಡೆಗೇ ಹೊರಟರು. ಫಿನ್‌ಲೆಪಂಚೆ, ಸರ್ಜ್‌ಕೋಟು, ಜರತಾರಿ ಪೇಟ ಧರಿಸಿದ್ದರು. ಶ್ಯಾಮವರ್ಣ. ನಡಿಗೆಗೆ ಗಾಂಭೀರ್ಯವನ್ನೂ ನೋಟಕ್ಕೆ ಘನತೆಯನ್ನೂ ಕೊಡುವ ದೈಹಿಕ ಪುಷ್ಟಿ. ಗೌರವಸ್ಥರು, ಎನ್ನಿಸಿತು.

ಮುಂದುಗಡೆ ಸಮಾಜದ ಆಧಾರಸ್ತಂಭವಾದ ಈ ಶ್ರೀಮಂತರು; ಅವರ ಹಿಂದೆ ನವನಾಗರಿಕತೆಯ ದೃಷ್ಟಾಂತವಾದ ಆ ಯುವಕ; ತೀರ ಹಿಂದೆ ನಾನು ಹೀಗೆ ಸಾಲಾಗಿ ಹೋಗುತ್ತಿದ್ದೆವು.

ದಾರಿಯಲ್ಲಿ ಒಂದು ದೇವಸ್ಥಾನ ಸಿಕ್ಕಿತು. ಶ್ರೀಮಂತರು ನಿಂತು, ಪಾದರಕ್ಷೆಯನ್ನು ಕಳಚಿ, ತಲೆಬಾಗಿ ಕೈಮುಗಿದು, ಪಾದರಕ್ಷೆಯನ್ನು ಪುನಃ ಮೆಟ್ಟಿಕೊಂಡು ಮುಂದಕ್ಕೆ ಹೋದರು. ಇವರ ವರ್ತನೆ ಸ್ತುತ್ಯ, ಈತ ಮಹನೀಯ, ಎಂದುಕೊಂಡೆ, ಯುವಕ ಸಿಗರೇಟಿನ ಹೊಗೆಯ ಮೋಡವನ್ನು ಊದುತ್ತ ನೆಟ್ಟಗೆ ನಡೆದ ಹಳಬರ ಸತ್ಸಂಪ್ರದಾಯಕ್ಕೂ ಆಧುನಿಕ ಯುವಜನದ ತಾತ್ಸಾರಕ್ಕೂ ಎಷ್ಟು ಅಂತರ ಎಂದುಕೊಂಡೆ.

ನಾವು ಬಸ್ ಹತ್ತಿದಾಗ ನೂಕು ನುಗ್ಗಲು ಇಲ್ಲದಿದ್ದರೂ, ನಾವು ಮೂವರಿಗೂ ಕುಳಿತುಕೊಳ್ಳಲು ಸ್ಥಳ ಇರಲಿಲ್ಲ ಸ್ತ್ರೀಯರಿಗೆ ಮೀಸಲಾಗಿಟ್ಟಿದ್ದ ಸಾಲುಗಳಲ್ಲಿ ಒಂದು ಸಾಲು ಮಾತ್ರ ಬರಿದಾಗಿತ್ತು. ಯುವಕ ನೆಟ್ಟಗೆ ಹೋಗಿ ಅಲ್ಲಿ ಕುಳಿತ. ಕಂಡಕ್ಟರ್, "ಅದು ಲೇಡೀಸ್ ಸೀಟ್, ಸಾರ್." ಎಂದ. ಯುವಕ, "ಯಾರಾದರೂ ಬಂದಾಗ ಎದ್ದರಾಯಿತು." ಎನ್ನುತ್ತಾ ಬಿಗಿಯಾಗಿ ಕುಳಿತ. ವಯೋವೃದ್ಧರಾದ ನಮ್ಮ ಶ್ರೀಮಂತರೂ ಪಕ್ಕದಲ್ಲಿ ಕುಳಿತರು— ಸಹಜವೇ. ಪುಕ್ಕಲನಾದ ನಾನುಮಾತ್ರ ಪಟ್ಟಿಗೆ ನೇತುಹಾಕಿಕೊಂಡು ನಿಂತೆ.

ಸ್ವಲ್ಪದೂರ ಹೋದಮೇಲೆ ಒಬ್ಬ ಕನ್ಯೆ ಹತ್ತಿದಳು. ಯುವಕ ಥಟಕ್ಕನೆ ಎದ್ದು ಸ್ಥಳ ಮಾಡಿಕೊಟ್ಟ. ಕಿಟಕಿಯ ಹೊರಗೆ ನೋಡುತ್ತಿದ್ದ ಶ್ರೀಮಂತರು ಏಳಲಾಗಲಿಲ್ಲ. ಅಧಿಕ ಪ್ರಸಂಗಿ ಪ್ರಯಾಣಿಕನೊಬ್ಬ ಅವರನ್ನು ತೋಳ್ಮುಟ್ಟಿ ಎಚ್ಚರಿಸಿದ. ಶ್ರೀಮಂತರು ಕಡುನೋಟವೊಂದನ್ನು ಸುತ್ತಲೂ ಬೀರುತ್ತ, "ಬಿಡಯ್ಯಾ, ಅಲ್ಲೆ ಸರಿಮಾಡಿಕೊಂಡು ಕೂತುಕೋತಾರೆ." ಎಂದು ಅಧಿಕಾರ ಕಂಠದಲ್ಲಿ ನುಡಿದರು.

ಎಂದಿಗೂ ಬಗೆ ಹರಿಯದ ಆ ಪ್ರಶ್ನೆ ಪುನಃ ನನ್ನ ಮನಸ್ಸಿಗೆ ಎದಿರಾಯ್ತು. ಸಂಘ ಜೀವಿಯಾದ ಮನುಷ್ಯನಿಗೆ ದೈವಭಕ್ತಿ ಒಂದಿದ್ದರೆ ಸಾಕೆ? ಸಾಧಾರಣ ಸೌಜನ್ಯ ಅವಶ್ಯಕವಲ್ಲವೆ?—"ಇತರರಿಗೆ ತೊಂದರೆಯನ್ನೊ ಸೊಂಪನ್ನೊ ಕೊಡುವ ಸಣ್ಣಪುಟ್ಟ ಕುಂದುಗಳನ್ನು ತಿದ್ದಿಕೊಳ್ಳುವ ಬುದ್ಧಿಯನ್ನು ನನಗೆ ದೇವರು ಕೊಟ್ಟಿದ್ದರೆ ಸಾಕು." ಎಂದುಕೊಂಡೆ.

ಬೆ. ಚಂ.




"ಸದ್ಯ! ..ನಂದು ಫೇಲಾಯ್ತಮ್ಮ, ಇನ್ನೊಂದು ವರ್ಷ ಕಾಲೇಜಿಗೆ ಹೋಗಬಹುದ ನಂದು? .."

# "ಹಗಲುಗನಸಿನ ರಾಷ್ಟ್ರ"

(೧)

---

ಕೇವಲ ಕೂಲಿಯ ಮನೆಯಲ್ಲಿ ಅತಿಥಿಗಳನ್ನು ಸ್ವಾಗತಿಸಲು ಒಂದು ಕೊಠಡಿ, ದಂಪತಿಗಳು ಮಲಗಲು ಒಂದು ಕೊಠಡಿ, ಮಕ್ಕಳು ಮಲಗಲು ಒಂದು ಕೊಠಡಿ, ಮೋಟಾರಿರಿಸಲು ಒಂದು ಕೊಠಡಿ, ರೇಡಿಯೋ ಇಟ್ಟುಕೊಳ್ಳಲು, ಪ್ರತಿಬಿಂಬನ ನೋಡಲು ಒಂದು ಕೊಠಡಿ, ಅತ್ತೆ ಬಂದರೆ ಒಂದು ಲಾಯದಂತಹ ಕೊಠಡಿ!.

ಆಹಾ! ಎಂತಹ ಸ್ವರ್ಗದಂತಹ ರಾಜ್ಯ! ಅಲ್ಲಿ ಹುಟ್ಟಬೇಕು, ಅಲ್ಲಿ ಬೆಳೆದು ಬಾಳಬೇಕು ಎಂದು ಪಟ್ಟೆ ಪಟ್ಟೆಯ ನಕ್ಷತ್ರಗಳ ರಾಜ್ಯದಿಂದ ಬಂದ ಭಾರತೀಯ ಬಲು ಹೊಗಳಿದ.

*　　　*　　　*

ನಮ್ಮೂರಿನಲ್ಲಿ ನಮ್ಮ ಹಿರಿಯಾಳುಗಳಿರುವೆಡೆಯಲ್ಲಿ ಅತಿಥಿಗಳನ್ನು ರಸ್ತೆಯಲ್ಲಿ ಸ್ವಾಗತಿಸುತ್ತೇವೆ, ದಂಪತಿಗಳು ಎಲ್ಲರೂ ನಿದ್ರೆಮಾಡಿದ ಮೇಲೆ ಮಲಗುತ್ತಾರೆ, ಮಕ್ಕಳು ಅಲ್ಲೇ ಮಲಗುತ್ತವೆ, ಮೋಟಾರಿರಿಸಲು ಮೋಟಾರೇ ಇಲ್ಲ, ರೇಡಿಯೋ ಇಡಲು, ರೇಡಿಯೋ ಇಲ್ಲ, ಆದರೂ ಕಡುಬಡವನ ಮನೆಯಲ್ಲೂ ದೇವರಿಗೆ ವಿಶಾಸ ಲಾದ ತಾಣ ಇದೆ. ಅತ್ತೆ ಬಂದರೆ ಅಲ್ಲೇ ಮಲಗುತ್ತಾಳೆ.

ಆಹಾ! ಎಂತಹ ಕಪಟವಿಲ್ಲದ ಒಮ್ಮನಸ್ಸಿನ ರಾಜ್ಯ! ಅಲ್ಲಿ ಹುಟ್ಟಬೇಕು, ಅಲ್ಲಿ ಬೆಳೆದು ಬಾಳಬೇಕು, ಎಂದು ಪಟ್ಟೆ ಪಟ್ಟೆಯ ನಕ್ಷತ್ರಗಳ ರಾಜ್ಯದವ ಭಾರತ ವನ್ನೂ, ಭಾರತದ ಜನಜೀವನವನ್ನೂ ಹೊಗಳಿದ.

*　　　*　　　*

(೨)

ಜಲಗಾರ ಜೇಮ್ಸನಿಗೆ ೬೦೦ ರೂಪಾಯಿ ತಿಂಗಳ ಸಂಬಳ ಅಲ್ಲಿ. ಬೆಳಗ್ಗೆದ್ದು ಹೊಟ್ಟೆತುಂಬ ತಿಂದು ಹೊರಟನವ ದೈನಂದಿನ ಕೆಲಸಕ್ಕೆ–ಮಧ್ಯಾಹ್ನ ಹೋಟೆಲೊಂದ ರಲ್ಲಿ ೩ರೂಪಾಯಿನಷ್ಟು ತೆತ್ತು ಊಟಮಾಡಿದ. ಸಂಜೆ ೬ಕ್ಕೆ ೨ರೂಪಾಯಿನಷ್ಟು ಚಾಕಲೇಟ್ ಮಡದಿಗೆಂದು ಕೊಂಡುತಂದ–ಸಂಬಳದೊಂದಿಗೆ—

೫೦೦ ರೂಪಾಯಿನಷ್ಟನ್ನೂ ಚಾಕಲೇಟನ್ನೂ ಜಲಗಾರ ಜಲಜಾಕ್ಷಿಯ ಕೈಯ ಲಿಟ್ಟು ಸಂತಸಗೊಂಡ. ಮೂವರು ಮಕ್ಕಳನ್ನೂ ಮುದ್ದಾಡಿದ. ಉಂಡು ಸಂತಸದಿಂದ ಅಂದು ಮಲಗಿದ. ಸ್ವರ್ಗಸುಖವನ್ನೂ ಕಂಡ.

ತಾರೀಖು ಇಪ್ಪತ್ತು. ಜಲಗಾರ ಮನೆಗೆ ಬಂದ ಮೋಟಾರಿನಲ್ಲಿ. ಮೂವರು ಮಕ್ಕಳು ಎದುರುಗೊಂಡರು. ಕೇಳಲು ರೇಡಿಯೋ ಇದೆ. ಅದನ್ನು ಹಚ್ಚಿ ಕೇಳಲು, ಊಟಕ್ಕೆ ಮುಂಚೆ ವಿಶ್ರಮಿಸಿಕೊಳ್ಳಲು, ಮಕ್ಕಳನ್ನು ಆಡಿಸುತ್ತಾ ಕುಳಿತ. ರೇಡಿಯೋ ಕೆಳಗೆ ಒಂದು ಪತ್ರವಿತ್ತು. ನನಗೆ ಬೇಜಾರಾದುದರಿಂದ, ಜಾರ್ನ್‌ನ ಜತೆಗೂಡಿ ಹೋಗಿದ್ದೇನೆ. ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳಿ ಎಂದು ಬರೆದ ಮಡದಿಯ ಪತ್ರ. ರೇಡಿಯೋದಲ್ಲಿ ಜಾಸ್ ಸಂಗೀತ ಉದ್ವೇಗದಿಂದ ಪ್ರಸಾರವಾಗುತ್ತಿತ್ತು ಜೇಮ್ಸನ ಮನಸ್ಸೂ ಅದೇ ರೀತಿಯಾಗಿತ್ತು.

* * *

ಅಧಿಕಾರಿ ಆನಂದರಾಯ ಬೆಳಗೆದ್ದು ಗಂಜಿ ಕುಡಿದು ಆಫೀಸಿಗೆ ಹೊರಟಿದ್ದ. ತಿಂಗಳು ದುಡಿದರೆ ೬೦ರೂಪಾಯಿ ಸಂಬಳ. ಮನೆಯಲ್ಲಿ ಕಟ್ಟಿಟ್ಟ ಮೊಸರನ್ನದ ಬುತ್ತಿಯನ್ನೂ ಮಧ್ಯಾಹ್ನ ತಿಂದ. ದಿನವೆಲ್ಲಾ ದುಡಿದು ಸಂಜೆ ಬರುವಾಗ ಸಂಬಳದಲ್ಲಿ ಎರಡಾಣೆಗೆ ಒಂದು ಮಲ್ಲಿಗೆದಂಡೆಯನ್ನು ಕೊಂಡು ತಂದ. ಎರಡನ್ನೂ ಆನಂದರಾಯ ಆಕೆಯ ಕೈಲಿಟ್ಟ. ಮೂವರು ಮಕ್ಕಳನ್ನು ಮುದ್ದಾಡುತ್ತಾ ಅಂಬಲಿ ತುಂಬೆಸೊಪ್ಪನ್ನು ಉಂಡು ಸಂತಸದಿಂದ ನಿದ್ರೆಮಾಡಿದ. ಸ್ವರ್ಗಸುಖವನ್ನೇ ಕಂಡ.

ತಾರೀಖು ಮೂವತ್ತು. ಆನಂದರಾಯ ಮನೆಗೆ ನಡೆದು ದಣಿದು ಬಂದ. ಮೂವರು ಮಕ್ಕಳು ಮಡದಿಯ ಮುಂದೆ ನಿಂತು ಎದುರುಗೊಂಡರು. ಅಂಗಿ ರುಮಾಲು ತೆಗೆದಿರಿಸಿ ಸಾರಿಸಿದ ನೆಲದಮೇಲಿದ್ದ ಚಾಪೆಯಮೇಲೆ ಕುಳಿತ. ಮಡದಿ ನಸುನಗುತ ತಂದಿಟ್ಟ ತಂಬಿಟ್ಟು ಅವಲಕ್ಕಿಯನ್ನು ನಗುನಗುತ ತಿಂದ.

—ಅವನ ಮನೆಯಲ್ಲಿ ರೇಡಿಯೋ ಇಲ್ಲ–ಆದರೆ ಮಡದಿ ಇದ್ದಾಳೆ.

* * *

(೩)

ಸರ್ವ ಸ್ವತಂತ್ರರಾಷ್ಟ್ರದಲ್ಲಿ ಶಾಸ್ತ್ರಿಗಳು ತಮ್ಮ ಪ್ರಯೋಗ ಕ್ಷೇತ್ರದಿಂದ ಸಂಜೆ ಹಿಂತಿರುಗಿದರು. ಕಳೆದ ಮೂರು ವಾರಗಳಿಂದ ವಿಜ್ಞಾನದ ಪ್ರಯೋಗದಲ್ಲೇ ಮಗ್ನರಾಗಿದ್ದ ಅವರಿಗೆ ಅಂದು ಸತ್ಯದ ಬೆಳಕು ಕಂಡಿದ್ದಿತು. ಮಾನವ ಜ್ಞಾನವನ್ನೇ ಮುಂದುವರಿಸುವಂತಹ ಪ್ರಯೋಗದ ಫಲಿತಾಂಶವದು. ಹೊರಬಿದ್ದಿತು.

ಮುಖವೆಲ್ಲಾ ಕೆಂಚಗಾಗಿತ್ತು. ಕೆಂಛಾಯೆಯ ಉಡುಪನ್ನೇ ಆದಿನ ಆಕಸ್ಮಿಕ ವಾಗಿ ಧರಿಸಿದ್ದರು. ಬಲು ಖುಷಿಯಿಂದಿದ್ದರು.

ರಾತ್ರಿಯ ಎಂಟು ಗಂಟೆಯಹೊತ್ತಿಗೆ ಸರ್ವ ಸ್ವತಂತ್ರರಾಷ್ಟ್ರದ ಕಾವಲುಗಾರರು ಶಾಸ್ತ್ರಿಗಳನ್ನು ಬಂಧಿಸಿದರು. ಕೆಂಛಾಯೆಯ ಉಡುಪನ್ನುಟ್ಟು ಕೆಂಚನಾದ ಮುಖ ವಿದ್ದುದರಿಂದ, ನಿಮ್ಮ ಪ್ರಯೋಗ ಫಲಿತಾಂಶವು ಕೆಂಬಾವುಟದವರಿಗೆ ತಿಳಿಸೇ ಇರ ಬೇಕು ನೀವು ಎಂದೇ ಅಂದರು. ಮೊಕದ್ದಮೆಯನ್ನೂ ಹೂಡಿದರು ಸಾಕಷ್ಟು ರುಜುವಾತಿಲ್ಲದುದರಿಂದ ಶಾಸ್ತ್ರಿಗಳು ನಿರಪರಾಧಿಗಳು ಆದರೂ ಇಂತಹ ಪ್ರಮುಖ ಪ್ರಯೋಗಗಳನ್ನು ನಡೆಸಲು ಅವರು ನಂಬಿಕಾರ್ಹರಲ್ಲ ಎಂದು ತೀರ್ಪಾಯಿತು. ಶಾಸ್ತ್ರಿಗಳು ಈಗ ತಮ್ಮ ತಿಥಿಯನ್ನೇ ಆಚರಿಸುತ್ತಿದ್ದಾರೆ, ಹಗಲುಗನಸಿನ ರಾಷ್ಟ್ರದಲ್ಲಿ, ಸ್ವರ್ಗದಂತಹ ರಾಜ್ಯದಲ್ಲಿ.

ಎಂತಹ ಮುಂದುವರಿದ ರಾಜ್ಯ!!

* * *

ಚಾರ್ವಾಕರಿಗೆ ಒಲು ಸೊರಗಾಗಿತ್ತು ನಮ್ಮ ದರಿದ್ರ ದೇಶದಲ್ಲಿ. ಜನರ ಕಷ್ಟ ನಿಷ್ಠುರಗಳನ್ನು ನೋಡಿ, ಪೂರ್ಣ ದೃಷ್ಟಿಯು ಇಲ್ಲದೆ, "ದೇವರೇ ಇಲ್ಲ ಈ ರಾಜ್ಯದಲ್ಲಿ" "ಇಂದು ತಿನ್ನಿ, ಕದ್ದು ತಿನ್ನಿ, ತಂಟೆಗೆ ಸಿಗಬೇಡಿ, ಸಿಕ್ಕಿದ್ದು ಬಿಡಬೇಡಿ" ಎಂದೇ ಘಂಟಾಘೋಷವಾಗಿ ಕೂಗಿಯೇ ಬಿಟ್ಟರು. ಹಿಮಾಲಯದಿಂದ ಕನ್ಯಾಕುಮಾರಿಯ ತನಕ ಕೇಳಿಸುವಂತೆ ಕೂಗಿದರು, ಈ ದಾಸ್ಯಶೃಂಖಲೆಯನ್ನು ತೊಟ್ಟ ದಾಸ್ಯರಾಜ್ಯದಲ್ಲಿ.

ಪೂರ್ಣಪ್ರಜ್ಞರು ಅಧಿಕಾರದಲ್ಲಿದ್ದು ಅಂದರು. ಇವರೆಲ್ಲಾ ಮಿದುಳನ್ನು ಉಪಯೋಗಿಸಲು ಪ್ರಯತ್ನಪಡುತ್ತಿದ್ದಾರೆ. ಎಂದಾದರೂ ಪೂರ್ಣಪ್ರಜ್ಞರಾಗು ತ್ತಾರೆ. ಇವರನ್ನು ಹುರಿದುಂಬಿಸಬೇಕು. ಆಲೋಚಿಸುವುದರಿಂದಲೇ ಅಭ್ಯುದಯ. ಅರ್ಧ ಹಾದಿಯಲ್ಲೇ ಅವರನ್ನು ಕೊನೆಗಾಣಿಸಬಾರದು ಎಂದು ಅವರಿಗೂ ಎಡೆಮಾಡಿ ಕೊಟ್ಟರು. ಅವರಿಗೂ ಸೌಕರ್ಯ ಒದಗಿಸಿದರು ಅವರನ್ನು ಮರ್ಯಾದೆಮಾಡಿದರು.

ಬಲು ಹಿಂದೆಬಿದ್ದ ಈ ರಾಷ್ಟ್ರದಲ್ಲಿ ಪಶುಗಳಂತೆ ಜೀವಿಸುವ ಮನುಷ್ಯರ ರಾಷ್ಟ್ರ ದಲ್ಲಿ, ದಾಸ್ಯತ್ವದಲ್ಲಿದ್ದ ಈ ರಾಜ್ಯದಲ್ಲಿ, ಜನರು ಸ್ವತಂತ್ರವಾಗಿ ಯೋಚಿಸಿ, ತಮಗೆ ತೋರಿದಂತೆ ತೀರ್ಪುಗೊಳ್ಳಲು ಅಂಕೆಯಿಲ್ಲದಿದ್ದಾರೆ. ಇದೆಂತಹ ಕೀಳುರಾಜ್ಯ!

" * *

ಹಗಲುಗನಸು ಕಂಡಾಗ ಆ ರಾಜ್ಯ ಚೆನ್ನು ಕನಸು ಎಚ್ಚೆತ್ತಾಗ ಇದ್ದ ರಾಜ್ಯವೇ ಚೆನ್ನು. ಅಲ್ಲವೇ?

* * *

—ಕನಸಿಗ,

———o———



VITOFERRIN

ITL

MYSORE INDUSTRIAL & TESTING LABORATORY LTD. MALLESWARAM BANGALORE

# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ.



**ತಯಾರಕರು :**

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ ಲಿಮಿಟೆಡ್,**

**ಮಲ್ಲೇಶ್ವರಂ - - - ಬೆಂಗಳೂರು 3**

REG. No. M. 4718 KORAVANJI, JULY 1954



Printed by B. S. Iyengar, Bangalore City
Publisher—B. N. Gupta. Editor—M. Sivaram.